بسم الله الرحمن الرحيم

الحمد لله رب العالمين الصلاة والسلام على رسول الله
وعلى آله وصحبه أجمعين

# هل إحتفال ميلاد النبي ﷺ إسلامي ؟

# ಪ್ರವಾದಿ(ﷺ)ರವರ ಜನ್ಮ ದಿನಾಚರಣೆ ಇಸ್ಲಾಮಿಕವೇ ?

✍ ಅಬೂಬಿಲಾಲ್ ಎಸ್.ಎಮ್
Mob: 7204705686

ಪ್ರಕಾಶಕರು
ಕರ್ನಾಟಕ ಸಲಫಿ ಫೌಂಡೇಶನ್
ಜಿದ್ದ ಘಟಕ, ಸೌದಿ ಅರೇಬಿಯಾ
Mob: +966 50 368 1457, +966 56 670 0451

# ಮುನ್ನುಡಿ

بســـــم الله الرحمن الرحيم

ಈ ಇಹಲೋಕ ಜೀವನದಲ್ಲಿ ಅಲ್ಲಾಹನನ್ನು ಮಾತ್ರ ಆರಾಧಿಸಿ ಜೀವನವನ್ನು ಸಾಗಿಸಿದರೆ ಮಾತ್ರ ಶಾಶ್ವತವಾದ ಪರಲೋಕ ಜೀವನದಲ್ಲಿ ಯಶಸ್ಸು ಗಳಿಸಲು ಸಾಧ್ಯ. ಪ್ರಾರ್ಥನೆ ಸಹಾಯಾರ್ಥನೆ, ನಮಾಝ್, ಝಕಾತ್, ಉಪವಾಸ, ಹಜ್ಜ್, ಹರಕೆ, ಮೃಗ ಬಲಿ ಮೊದಲಾದ ಎಲ್ಲ ಆರಾಧನೆಗಳನ್ನು ಅಲ್ಲಾಹನಿಗೆ ಮಾತ್ರ ಅರ್ಪಿಸಬೇಕು. ಅವುಗಳಲ್ಲಿ ಯಾವುದಾದರೂ ಒಂದನ್ನು ಅಲ್ಲಾಹೇತರರಿಗೆ ಅರ್ಪಿಸಿದರೆ ಅದು ಅಲ್ಲಾಹನು ಎಂದಿಗೂ ಕ್ಷಮಿಸದ ಮಹಾಪಾಪವಾದ ಶಿರ್ಕಾಗುತ್ತದೆ.

ಪ್ರವಾದಿ(ﷺ)ರವರನ್ನು ಪ್ರೀತಿಸಬೇಕಾದುದು ಪ್ರತಿಯೊಬ್ಬರ ಮೇಲಿರುವ ಕಡ್ಡಾಯ ಬಾಧ್ಯತೆಯಾಗಿದೆ. ಅವರನ್ನು ಪ್ರೀತಿಸದವನ ಈಮಾನ್ ಪೂರ್ತಿಯಾಗದು. ಪ್ರವಾದಿ(ﷺ) ರವರ ಚರ್ಯೆಯನ್ನು ಜೀವನದಲ್ಲಿ ಅಳವಡಿಸುವ ಮೂಲಕ ಅವರನ್ನು ಸರ್ವರಿಗಿಂತಲೂ ಹೆಚ್ಚಾಗಿ ಪ್ರೀತಿಸಬೇಕಾದುದು ಕಡ್ಡಾಯವಾಗಿದೆ. ಆದರೆ ನಮ್ಮ ಸಮುದಾಯದಲ್ಲಿ ಹೆಚ್ಚಿನ ಜನರು ಪ್ರವಾದಿ(ﷺ)ರವರನ್ನು ಪ್ರೀತಿಸುತ್ತೇವೆನ್ನುತ್ತಾ ಅವರ ಜನ್ಮ ದಿನಾಚರಣೆಯನ್ನು ಆಚರಿಸುತ್ತಿದ್ದಾರೆ. ಅವರ ಜನ್ಮ ದಿನಾಚರಣೆಯನ್ನು ಆಚರಿಸಿಕೊಂಡು ಅವರನ್ನು ಪ್ರಿತಿಸುವ ರೀತಿಯನ್ನು ಪ್ರವಾದಿಯವರಾಗಲಿ ಅವರ ಸ್ವಹಾಬಿಗಳಾಗಲಿ ತಾಬಿಉಗಳಾಗಲಿ ತಬಅತ್ತಾಬಿಈನ್‌ಗಳಾಗಲಿ ನಮಗೆ ಕಲಿಸಿಕೊಡಲಿಲ್ಲ. ಪ್ರವಾದಿ(ﷺ)ರವರು ಕಲಿಸಿ ಕೊಡದ ಮತ್ತು ಸ್ವಹಾಬಿಗಳಿಗೆ ಪರಿಚಯವಿಲ್ಲದ ಆಚಾರ–ಅನುಷ್ಠಾನಗಳು ಬಿದ್‌ಅತಾಗಿದೆ.

ಪ್ರಾರ್ಥನೆ ಅಲ್ಲಾಹನೊಂದಿಗೆ ಮಾತ್ರ ಎಂಬುವುದು ಇಸ್ಲಾಮಿನ ಮೂಲ ತತ್ವವಾಗಿದೆ. ಆ ಪ್ರಾರ್ಥನೆಯನ್ನು ಅಲ್ಲಾಹೇತರರೊಂದಿಗೆ ಮಾಡಿದರೆ ಶಿರ್ಕಾಗುತ್ತದೆ. ಆದರೆ ಪ್ರವಾದಿ ಜನ್ಮ ದಿನವೆನ್ನುವ ಆ ದಿನ ಹಾಗೂ ಇನ್ನಿತರ ದಿನಗಳಲ್ಲಿ ಮಸೀದಿಗಳಲ್ಲೂ ಮನೆಗಳಲ್ಲೂ ಮುಸ್ಲಿಯಾರುಗಳು ಮುಗ್ಧ ಜನರನ್ನು ಒಟ್ಟು ಸೇರಿಸಿ ಪಾರಾಯಣ ಮಾಡುವ ಮಂಕೂಸ್ ಮೌಲಿದ್‌ನಲ್ಲಿ ಅಲ್ಲಾಹನ ಪ್ರವಾದಿ(ﷺ)ರವರಲ್ಲಿ ಪಾಪಾವಿಮೋಚನೆಯನ್ನು ಮತ್ತು ಶಫಾಅತನ್ನು ಕೇಳಲಾಗುತ್ತಿದೆ. ಹಾಗೆಯೇ ಅದು ಇನ್ನಿತರ ಹಲವಾರು ಕಟ್ಟುಕಥೆಗಳಿಂದಲೂ ತುಂಬಿಕೊಂಡಿದೆ. ಆದ್ದರಿಂದ ಅದರಲ್ಲಿರುವ ಕುರ್‌ಆನ್ ಮತ್ತು ಸುನ್ನತಿಗೆ ವಿರುದ್ಧವಾದ ಆಶಯಾದರ್ಶಗಳನ್ನು ಪವಿತ್ರ ಕುರ್‌ಆನ್ ಮತ್ತು ಸುನ್ನತಿನೊಂದಿಗೆ ತುಲನ ಮಾಡಿಕೊಂಡು ಈ ಕೃತಿಯಲ್ಲಿ ಪ್ರತಿಪಾದಿಸಲಾಗಿದೆ. ಜೊತೆಗೆ ಮುಸ್ಲಿಯಾರ್‌ಗಳು ಪ್ರವಾದಿ ಜನ್ಮ ದಿನಾಚರಣೆಗೆ ಆಧಾರವಾಗಿ ದುರ್ವ್ಯಾಖ್ಯಾನ ಮಾಡುತ್ತಿರುವ ಕುರ್‌ಆನಿನ ಆಯತ್‌ಗಳ ನೈಜತೆಯನ್ನೂ ವಿವರಿಸಲಾಗಿದೆ.

ಪ್ರವಾದಿ(ﷺ)ರವರನ್ನು ಪ್ರೀತಿಸುವುದು ಹೇಗೆಂದು ಸರಿಯಾದ ರೀತಿಯಲ್ಲಿ ತಿಳಿಯಲಿಚ್ಛಿಸುವವರ ಮುಂದೆ ಈ ಕಿರು ಕೃತಿಯನ್ನು ಸಮರ್ಪಿಸುತ್ತೇನೆ. ಈ ಕೃತಿಯಲ್ಲಿ ಏನಾದರೂ ಲೋಪದೋಶಗಳು ಕಂಡು ಬಂದಲ್ಲಿ ನನ್ನ ಗಮನಕ್ಕೆ ತರಬೇಕಾಗಿ ವಿನಂತಿ. ಈ ಕೃತಿಯನ್ನು ಮುದ್ರಿಸಲು ಎಲ್ಲಾ ರೀತಿಯಲ್ಲೂ ಸಹಾಯ ಸಹಕಾರ ಮಾಡಿದ ಕರ್ನಾಟಕ ಸಲಫಿ ಫೌಂಡೇಶನ್ ದಮ್ಮಾಮ್–ಖೋಬರ್ ಘಟಕದವರಿಗೆ ಅಲ್ಲಾಹನು ತಕ್ಕುದಾದ ಪ್ರತಿಫಲವನ್ನು ನೀಡಿ ಅನುಗ್ರಹಿಸಲಿ.

**ಅಬೂಬಿಲಾಲ್ ಎಸ್.ಎಮ್, ಚೊಕ್ಕಬೆಟ್ಟು**

بسم الله الرحمن الرحيم

# ಪ್ರವಾದಿ ಜನ್ಮ ದಿನಾಚರಣೆ ಇಸ್ಲಾಮಿಕವೇ ?

الحمد لله رب العالمين الصلاة والسلام على رسول الله وعلى آله وصحبه أجمعين

ಪ್ರವಾದಿ ಮುಹಮ್ಮದ್(ﷺ)ರವರು ಅಲ್ಲಾಹನ ಸೃಷ್ಟಿಗಳಲ್ಲೇ ಅತೀ ಶ್ರೇಷ್ಠರು. ಅವರನ್ನು ಪ್ರೀತಿಸುವುದು ಈಮಾನಿನ ಭಾಗವಾಗಿದೆ. ಅದು ಪ್ರತಿಯೋರ್ವ ಸತ್ಯವಿಶ್ವಾಸಿಯ ಮೇಲೆ ಕಡ್ಡಾಯವೂ ಆಗಿದೆ. ಪ್ರವಾದಿ ಮುಹಮ್ಮದ್(ﷺ) ರವರನ್ನು ಪ್ರೀತಿಸದವನು ಸತ್ಯವಿಶ್ವಾಸಿಯಲ್ಲ. ಯಾಕೆಂದರೆ ಅನಸ್(رضي الله عنه)ರವರು ವರದಿ ಮಡುವ ಹದೀಸ್‌ನಲ್ಲಿ ಪ್ರವಾದಿ(ﷺ)ರವರು ಹೇಳಿದರು:

عَنْ أَنَسٍ قَالَ : قَالَ النَّبِيُّ صلى الله عليه وسلم :«لاَ يُؤْمِنُ أَحَدُكُمْ حَتَّى أَكُونَ أَحَبَّ إِلَيْهِ مِنْ وَالِدِهِ وَوَلَدِهِ وَالنَّاسِ أَجْمَعِينَ»

**“ನಿಮ್ಮ ಮಾತಾ–ಪಿತರು, ಮಕ್ಕಳು ಮತ್ತು ಸರ್ವ ಜನರಿಗಿಂತಲೂ ಹೆಚ್ಚಾಗಿ ನನ್ನನ್ನು ಪ್ರೀತಿಸುವ ವರೆಗೆ ನಿಮ್ಮಲ್ಲಿ ಯಾರೂ ಸತ್ಯವಿಶ್ವಾಸಿಗಳಾಗಲಾರಿರಿ.”** (ಬುಖಾರಿ, ಮುಸ್ಲಿಮ್)

ಅಂದರೆ ಪ್ರವಾದಿ(ﷺ)ರವರನ್ನು ಸಾಮಾನ್ಯವಾದ ರೀತಿಯಲ್ಲಿ ಪ್ರೀತಿಸಿದರೆ ಸಾಕಾಗದು. ಸರ್ವಕ್ಕಿಂತಲೂ ಹೆಚ್ಚಾಗಿ ಅವರನ್ನು ಪ್ರೀತಿಸಿದರೆ ಮಾತ್ರವೇ ಈಮಾನ್ (ವಿಶ್ವಾಸ) ಪೂರ್ತಿಯಾಗುವುದು. ನಮ್ಮ ಪ್ರೀತಿಯಲ್ಲಿ ಪ್ರಥಮ ಸ್ಥಾನ ಅಲ್ಲಾಹನಿಗೆ, ದ್ವಿತೀಯ ಸ್ಥಾನ ರಸೂಲ್(ﷺ)ರವರಿಗೆ, ಇತರರಿಗೆ ಆ ನಂತರದ ಸ್ಥಾನವನ್ನು ಮಾತ್ರವೇ ನೀಡಬೇಕು. ಇದಕ್ಕೆ ವಿರುದ್ಧವಾಗಿ ನಡೆಯುವವರು ಅಲ್ಲಾಹನ ಶಿಕ್ಷೆಗೆ ಗುರಿಯಾಗುವರು. ಅವರು ಅಲ್ಲಾಹನ ಶಿಕ್ಷೆಯ ಆಜ್ಞೆಯನ್ನು ನಿರೀಕ್ಷಿಸಲಿ. ಅಲ್ಲಾಹನು ಹೇಳುತ್ತಾನೆ:

﴿ قُلْ إِن كَانَ ءَابَآؤُكُمْ وَأَبْنَآؤُكُمْ وَإِخْوَٰنُكُمْ وَأَزْوَٰجُكُمْ وَعَشِيرَتُكُمْ وَأَمْوَٰلٌ ٱقْتَرَفْتُمُوهَا وَتِجَٰرَةٌ تَخْشَوْنَ كَسَادَهَا وَمَسَٰكِنُ تَرْضَوْنَهَآ أَحَبَّ إِلَيْكُم مِّنَ ٱللَّهِ وَرَسُولِهِۦ وَجِهَادٍ فِى سَبِيلِهِۦ فَتَرَبَّصُوا۟ حَتَّىٰ يَأْتِىَ ٱللَّهُ بِأَمْرِهِۦ ۗ وَٱللَّهُ لَا يَهْدِى ٱلْقَوْمَ ٱلْفَٰسِقِينَ ﴿٢٤﴾ ﴾

**"(ಓ ಪ್ರವಾದಿಯವರೇ!) ಹೇಳಿರಿ: ನಿಮ್ಮ ಪಿತಂದಿರಾಗಲಿ, ನಿಮ್ಮ ಪುತ್ರರಾಗಲಿ, ನಿಮ್ಮ ಸಹೋದರರಾಗಲಿ, ನಿಮ್ಮ ಪತ್ನಿಯರಾಗಲಿ, ನಿಮ್ಮ ಕುಟುಂಬಿಕರಾಗಲಿ, ನೀವು ಸಂಪಾದಿಸಿಟ್ಟಿರುವ ಸಂಪತ್ತಾಗಲಿ, ನಷ್ಟವುಂಟಾಗಬಹುದೆಂದು ನೀವು ಭಯಪಡುವ ವ್ಯಾಪಾರವಾಗಲಿ, ನೀವು ಪ್ರೀತಿಸುವ ವಸತಿಗಳಾಗಲಿ ನಿಮಗೆ ಅಲ್ಲಾಹುವಿಗಿಂತಲೂ, ಅವನ ಸಂದೇಶವಾಹಕರಿಗಿಂತಲೂ ಮತ್ತು ಅವನ ಮಾರ್ಗದಲ್ಲಿರುವ ಹೋರಾಟಕ್ಕಿಂತಲೂ ಹೆಚ್ಚು ಪ್ರಿಯವಾಗಿದ್ದರೆ ಅಲ್ಲಾಹು ತನ್ನ ಆದೇಶವನ್ನು ತರುವವರೆಗೆ ನೀವು ಕಾಯುತ್ತಿರಿ. ಧಿಕ್ಕಾರಿಗಳಾದ ಜನರನ್ನು ಅಲ್ಲಾಹು ಸನ್ಮಾರ್ಗದಲ್ಲಿ ಸೇರಿಸಲಾರನು."**
(ಸೂರತು ತೌಬ: 9/24)

ಮೇಲಿನ ಕುರ್‌ಆನ್ ಸೂಕ್ತ ಮತ್ತು ಪ್ರವಾದಿ ವಚನವನ್ನು ಸ್ವಹಾಬಿಗಳು ಅದೇ ರೀತಿ ಅವರ ಜೀವನದಲ್ಲಿ ಅಳವಡಿಸಿದರು. ಪ್ರವಾದಿ ಮುಹಮ್ಮದ್(ﷺ) ರವರ ಕಾಲಿಗೆ ಒಂದು ಮುಳ್ಳು ತಾಗುವುದನ್ನೂ ಅವರು ಸಹಿಸಲಿಲ್ಲ. ಪ್ರವಾದಿ ಸ್ನೇಹದ ಭಾಗವಾಗಿ ಪ್ರವಾದಿ(ﷺ)ರವರ ಮೇಲೆ ಬೀಳುವ ಬಿಲ್ಲು-ಬಾಣಗಳನ್ನು ಸ್ವಂತ ಶರೀರವನ್ನು ತೋರಿಸಿ ತಡೆದರು. ಅಲ್ಲಾಹನ ಮಾರ್ಗದಲ್ಲಿ ಜೀವವನ್ನೇ ಬಲಿ ನೀಡಲು ಪ್ರವಾದಿ ಸ್ನೇಹವು ಅವರಿಗೆ ಪ್ರೇರಕವಾಯಿತು. ಸ್ವಹಾಬಿಗಳು ಅವರ ಸ್ವಂತ ಶರೀರಕ್ಕಿಂತಲೂ ಹೆಚ್ಚಾಗಿ ಪ್ರವಾದಿ(ﷺ)ರವರನ್ನು ಪ್ರೀತಿಸಿದರು. ಇಹಲೋಕದಲ್ಲಿ ಮಾತ್ರವಲ್ಲ, ಪರಲೋಕದಲ್ಲೂ ಪ್ರವಾದಿ(ﷺ)ರವರೊಂದಿಗೆ ಇರಲು ಅವರು ಬಯಸಿದರು. ಆದ್ದರಿಂದ ಪ್ರವಾದಿ(ﷺ)ರವರನ್ನು ಪ್ರೀತಿಸುವುದು ಒಬ್ಬ ಸತ್ಯ ವಿಶ್ವಾಸಿಯ ಮೇಲೆ ಕಡ್ಡಾಯ ಬಾಧ್ಯತೆಯಾಗಿದೆ. ಕುರ್‌ಆನ್ ಮತ್ತು ಸುನ್ನತ್ ಕಲಿಸಿ ಕೊಟ್ಟ ರೀತಿಯಲ್ಲಿ ಹಾಗೂ ಅದನ್ನು ಸ್ವಹಾಬಿಗಳು ಅವರ ಜೀವನದಲ್ಲಿ ಅಳವಡಿಸಿದ ರೀತಿಯಲ್ಲಿ ಮಾತ್ರವೇ ನಾವು ಪ್ರವಾದಿ(ﷺ)ರವರನ್ನು ಪ್ರೀತಿಸಬೇಕು. ಅದಕ್ಕೆ ವಿರುದ್ಧವಾದ ರೀತಿಯು ಪ್ರವಾದಿ ಸ್ನೇಹವಲ್ಲ, ಪ್ರವಾದಿ ನಿಂದನೆಯಾಗಿದೆ. ಯಾಕೆಂದರೆ ಪ್ರವಾದಿ(ﷺ)ರವರು ಇಸ್ಲಾಮನ್ನು ಅದರ ಪೂರ್ಣರೂಪದಲ್ಲಿ ಸಮುದಾಯಕ್ಕೆ ನೀಡಿದ ಬಳಿಕವೇ ಇಹಲೋಕವನ್ನು ತ್ಯಜಿಸಿದ್ದಾರೆ. ಇಸ್ಲಾಮಿನ ಪೂರ್ತೀಕರಣದ ಬಗ್ಗೆ ಅಲ್ಲಾಹನೇ ಹೇಳುತ್ತಾನೆ:

﴿ الْيَوْمَ أَكْمَلْتُ لَكُمْ دِينَكُمْ وَأَتْمَمْتُ عَلَيْكُمْ نِعْمَتِي وَرَضِيتُ لَكُمُ الإِسْلاَمَ دِينًا ﴾

**"......ಇಂದು ನಾನು ನಿಮಗೆ ನಿಮ್ಮ ಧರ್ಮವನ್ನು ಪೂರ್ತಿಗೊಳಿಸಿ ಕೊಟ್ಟಿರುವೆನು. ನನ್ನ ಅನುಗ್ರಹವನ್ನು ನಿಮಗೆ ನಾನು ಪೂರ್ಣಗೊಳಿಸಿ ಕೊಟ್ಟಿರುವೆನು. ಧರ್ಮವಾಗಿ ಇಸ್ಲಾಮನ್ನು ನಾನು ನಿಮಗೆ ತೃಪ್ತಿಪಟ್ಟು ಕೊಟ್ಟಿರುವೆನು......"**
(ಸೂರಃ ಅಲ್ ಮಾಇದಃ: 5/3)

ಆದ್ದರಿಂದ ಅಲ್ಲಾಹನು ತೃಪ್ತಿಪಟ್ಟು ನೀಡಿದ ಅನುಗ್ರಹವಾದ ಇಸ್ಲಾಮಿನಲ್ಲಿ ಏನನ್ನಾದರೂ ಸೇರಿಸಲು ಅಥವಾ ಅದರಿಂದ ಯಾವುದನ್ನಾದರೂ ಕಡಿತಗೊಳಿಸಲು ಯಾರಿಗೂ ಅಧಿಕಾರವಿಲ್ಲ. ನಮ್ಮನ್ನು ಸ್ವರ್ಗದ ಕಡೆಗೆ ನಿಕಟಗೊಳಿಸುವ ಮತ್ತು ನರಕದಿಂದ ದೂರಗೊಳಿಸುವ ಎಲ್ಲಾ ಕರ್ಮಗಳನ್ನೂ ಪ್ರವಾದಿ(ﷺ) ರವರು ನಮಗೆ ಕಲಿಸಿಕೊಟ್ಟಿದ್ದಾರೆ. ಹಾಗಿರುವಾಗ ಯಾರಾದರೂ ಹೊಸತಾದ ಧಾರ್ಮಿಕ ಕರ್ಮವೊಂದನ್ನು ಪ್ರಾರಂಭಿಸಿದರೆ ಅದನ್ನು ನಾವು ತಳ್ಳಬೇಕು.

ಆಇಶಾ(رضي الله عنها)ರಿಂದ ವರದಿ: ಪ್ರವಾದಿ(ﷺ)ರವರು ಹೇಳಿದರು:

«مَنْ أَحْدَثَ فِي أَمْرِنَا هَذَا مَا لَيْسَ فِيهِ فَهُوَ رَدٌّ (متفق عليه) وفي رواية: مَنْ عَمِلَ عَمَلاً لَيْسَ عَلَيْهِ أَمْرُنَا فَهْوَ رَدٌّ» - مسلم

**"ನಮ್ಮ ಈ ಧರ್ಮದಲ್ಲಿಲ್ಲದ ಯಾವುದಾದರೊಂದು ಕರ್ಮವನ್ನು ಯಾರಾದರೂ ಹೊಸತಾಗಿ ತಂದರೆ ಅದನ್ನು ತಿರಸ್ಕರಿಸಬೇಕಾಗಿದೆ."**(ಬುಖಾರಿ, ಮುಸ್ಲಿಂ). **ಇನ್ನೊಂದು ವರದಿಯಲ್ಲಿ: "ನಮ್ಮ ಆದೇಶವಿಲ್ಲದ ಒಂದು ಕರ್ಮವನ್ನು ಯಾರಾದರೂ ಮಾಡಿದರೆ ಅದನ್ನು ತಿರಸ್ಕರಿಸಬೇಕಾಗಿದೆ."**(ಮುಸ್ಲಿಂ)

**ಮೌಲಿದ್ ಆಚರಣೆ ನೂತನವಾದುದು:** ಮೌಲಿದ್ ಆಚರಣೆಯು ಮೇಲೆ ವಿವರಿಸಲಾದಂತಹ ಬಿದ್‌ಅತ್‌ಗಳಲ್ಲಿ ಸೇರಿದ್ದಾಗಿದೆ. ಯಾಕೆಂದರೆ ಪ್ರವಾದಿ(ﷺ) ರವರು ತಮ್ಮ ಜನ್ಮ ದಿನವನ್ನು ಆಚರಿಸಲು ನಮಗೆ ಕಲಿಸಲಿಲ್ಲ, ಅವರು ಆಚರಿಸಲೂ ಇಲ್ಲ. ಪ್ರವಾದಿ(ﷺ)ರವರು ತಮಗಿಂತ ಮುಂಚಿನ ಯಾವುದೇ ಪ್ರವಾದಿಗಳ ಜನ್ಮದಿನವನ್ನು ಆಚರಿಸಲಿಲ್ಲ. ಆಚರಿಸಲು ನಮಗೆ ಕಲಿಸಿಯೂ ಇಲ್ಲ. ಪ್ರವಾದಿ(ﷺ)ರನ್ನು ಅತೀ ಹೆಚ್ಚು ಪ್ರೀತಿಸಿದ ಅವರ ಸಹಚರರಾದ ಸ್ವಹಾಬಿಗಳಲ್ಲಿ ಯಾರೂ ಅವರ ಜನ್ಮದಿನವನ್ನು ಆಚರಿಸಲಿಲ್ಲ. ಆ ನಂತರದ ತಲೆಮಾರಿನ ತಾಬಿಉಗಳೂ, ಅವರ ಬಳಿಕ ಬಂದ ತಬಅತ್ತಾಬಿಉಗಳೂ ಪ್ರವಾದಿ(ﷺ)ರವರ ಜನ್ಮದಿನವನ್ನು ಕೊಂಡಾಡಲಿಲ್ಲ. ಜನ್ಮದಿನವೆಂದು ನಂಬಿ ಇತರ ದಿನಗಳ ಆರಾಧನೆಗಳಿಗಿಂತ ಹೆಚ್ಚಾದ ಒಂದು ಆರಾಧನೆಯನ್ನು ಅಂದು ಅವರಾರೂ ಮಾಡಲಿಲ್ಲ. ಜನ್ಮದಿನದ ಭಾಗವಾಗಿ ಒಂದು ತುಂಡು ಖರ್ಜೂರವನ್ನೂ ಸಹ ಅವರು ದಾನ ನೀಡಲಿಲ್ಲ. ಹಾಗಿರುವಾಗ ಪ್ರವಾದಿ(ﷺ)ರವರನ್ನು ಪ್ರೀತಿಸುವವರು ಜನ್ಮದಿನಾಚರಣೆ ಕೊಂಡಾಡಬಾರದು. ಜನ್ಮದಿನ ಆಚರಿಸದೇ ಇರುವುದು ಪ್ರವಾದಿ ಸ್ನೇಹದ ಭಾಗವಾಗಿದೆ. ಮೀಲಾದುನ್ನಬಿ ಆಚರಿಸದೇ ಇರುವವರು(ಸಲಫಿಗಳು) ನೈಜ ಸುನ್ನಿಗಳೂ, ಆಚರಿಸುವವರು ನೂತನವಾದಿಗಳೂ ಆಗಿದ್ದಾರೆ.

ಪ್ರಥಮ ಮೂರು ತಲೆಮಾರಿನವರು ಅತ್ಯಂತ ಶ್ರೇಷ್ಠರೆಂದು ಪ್ರವಾದಿ(ﷺ) ರವರು ಹೇಳಿದರು. ಇಬ್ನ್ ಮಸ್‌ಊದ್(ؓ)ರಿಂದ ವರದಿ: ಅಲ್ಲಾಹುವಿನ ಪ್ರವಾದಿ(ﷺ) ಹೇಳಿರುವರು:

عَنْ عَبْدِ اللَّهِ ، رَضِيَ اللَّهُ عَنْهُ ، عَنِ النَّبِيِّ صلى الله عليه وسلم قَالَ : «خَيْرُ النَّاسِ قَرْنِي ثُمَّ الَّذِينَ يَلُونَهُمْ ثُمَّ الَّذِينَ يَلُونَهُمْ»

**"ಜನರಲ್ಲಿ ಅತ್ಯುತ್ತಮರು ನನ್ನ ತಲೆಮಾರಿನವರು. ಆ ಮೇಲೆ ಅವರನ್ನು ಹಿಂಬಾಲಿಸಿದವರು. ಆ ಮೇಲೆ ಅವರನ್ನು ಹಿಂಬಾಲಿಸಿದವರು....."**(ಬುಖಾರಿ, ಮುಸ್ಲಿಮ್)

ಈ ಮೂರು ತಲೆಮಾರಿನ ಸಜ್ಜನರು ಯಾರೂ ಮೌಲಿದ್ ಆಚರಿಸ ಲಿಲ್ಲವೆಂದು ಮೇಲಿನ ವಿವರಣೆಗಳಿಂದ ಸ್ಪಷ್ಟ. ಪ್ರಥಮ ಮೂರು ತಲೆಮಾರಿನಲ್ಲಿ ಮೌಲಿದ್ ಆಚರಣೆ ಇರಲಿಲ್ಲವೆಂದು ಮೌಲಿದ್ ಆಚರಿಸುವವರೇ ಸಮ್ಮತಿಸುತ್ತಾರೆ:

"ಪ್ರವಾದಿ(ﷺ)ರವರ ಉಪದೇಶ ನಿರ್ದೇಶಗಳನ್ನು ಜೀವನದಲ್ಲಿ ಯಥಾವತ್ತಾಗಿ ಅಳವಡಿಸಿದ ಪ್ರಥಮ ಶತಮಾನದವರ ಕಾಲದಲ್ಲಿ ಇಂತಹ ಒಂದು ಜನ್ಮದಿನವನ್ನು ಆಚರಿಸಬೇಕಾದ ಅವಶ್ಯಕತೆ ಇರಲಿಲ್ಲ.........ನಂತರದ ಕಾಲಗಳಲ್ಲಿ ಜನರು ಇಸ್ಲಾಮಿ ರೀತಿಯಿಂದ ದೂರವಾಗುತ್ತಾ ದೀನೀ ವಿಷಯಗಳಲ್ಲಿ ಅಶ್ರದ್ಧರಾದಾಗ ಅವರಿಗೆ ಬೋಧನೆಯ ಅಗತ್ಯವಾಯಿತು. ಹಿಜ್‌ರ ನಾಲ್ಕನೇ ಶತಮಾನದಿಂದ ಮುಸ್ಲಿಮ್ ಲೋಕದಲ್ಲಿ ಈ ಸಂಪ್ರದಾಯವು ಜಾರಿಗೆ ಬಂತು. ಪ್ರಮುಖ ವಿದ್ವಾಂಸರು ಅದಕ್ಕೆ ಅಂಗೀಕಾರ ನೀಡಿದರು. ಈ ವಿಷಯದಲ್ಲಿ ಹಲವಾರು ಗ್ರಂಥಗಳು ರಚಿಸಲ್ಪಟ್ಟಿತು."(ಸುನ್ನೀ ವಾಯ್ಸ್, 1981, ಡಿಸೆಂಬರ್ 8, ಪುಟ 3).

ಅಲ್ ಮವಾಹಿಬುಲ್ ಜಲಿಯ್ಯದಲ್ಲಿ ತಯವ ಮುಸ್ಲಿಯಾರ್ ಹೇಳುತ್ತಾರೆ: "ಮೌಲಿದ್ ಕಯಿಕ್ಕಲ್ ಮುಂಬ್ ಪದಿವಿಲ್ಲಾತದಾ **ಅದ್ ಹಿಜ್‌ರ ಮುನ್ನೂರಿನ್ನ್ ಶೇಷಂ ವನ್ನದಾ..."** ಅರ್ಥ: "ಮೌಲಿದ್ ಆಚರಣೆ ಮುಂಚೆ ರೂಢಿಯಲ್ಲಿರಲಿಲ್ಲ. ಅದು ಹಿಜ್‌ರ ಮುನ್ನೂರರ ಬಳಿಕ ಬಂದದ್ದಾಗಿದೆ. ಹೀಗೆ ಸಹಾವಿ ಹೇಳಿದ್ದಾಗಿ ಕಾಣುತ್ತದೆ. ಅದನ್ನು ಹಲಬಿಯ ಒಂದನೇ ಸಂಪುಟದಲ್ಲಿ ನೋಡಬೇಕಾಗಿದೆ."

ಇದು ನಂತರದ ಕಾಲದಲ್ಲಿ ಉಂಟಾದ ಬಿದ್‌ಅತೆಂದು ಇಬ್‌ನು ಹಜರುಲ್ ಹೈತಮಿ(ؒ) ಹೇಳಿದ್ದಾರೆಂದು ಸುಯೂಥಿ(ؒ) ಹೇಳುವುದನ್ನು ನೋಡಿರಿ:

(اَصْلُ الـمَوْلد بِدْعَة لَـمْ تنقُل عَنْ اَحَدٍ مِن السَّلفُ الصَّالِح مِنَ القُرَونِ الثَّلَاثَة)-الحاوي للفتاوى

**“ಮೌಲಿದ್‌ನ ಮೂಲವೇ ಬಿದ್‌ಅತ್ ಆಗಿದೆ. ಇದು ಮೂರನೇ ಶತಮಾನದ ವರೆಗಿನ ಸಲಫುಸ್ವಾಲಿಹ್‌ಗಳಿಂದ(ಮುಂಗಾಮಿಗಳಿಂದ) ಉಲ್ಲೇಖಿಸಲ್ಪಡಲಿಲ್ಲ.”**(ಅಲ್‌ಹಾವಿ: 1/259)

ಇದಕ್ಕೆ ಕುರ್‌ಆನ್ ಮತ್ತು ಸುನ್ನತಿನ ಬೆಂಬಲವಿಲ್ಲವೆಂದು ಇಮಾಮ್ ಫಾಕಿಹಾನಿ ಹೇಳುತ್ತಾರೆ:

لاَ أَعْلَمُ لِهَذَا الـمَوْلد أَصلاً فِي كِتَابِ وَلاَسُنَّةِ وَلاَينقُل عَمَلُهُ عَنْ أَحدٍ مِنْ عُلَمَاءِ الأُمَّة الذِينَ هُمْ قُدْوَةٌ فِي الدِّينِ, الـمُتَمَسِّكُونَ بِأثَارِ الـمُتَقَدِّمِينَ بَلْ هُوَ بِدْعَةٌ اَحدَثَهَا البَطَّالُونَ , وَشَهْوَةُ نَفْس إِعْتَنَى بِهَا الأَكَّالُونَ - الحاوي للفتاوى: 1/189

**“ಈ ಮೌಲಿದ್‌ಗೆ ಕುರ್‌ಆನ್ ಮತ್ತು ಸುನ್ನತಿನಲ್ಲಿ ಯಾವ ಪುರಾವೆಯೂ ಇಲ್ಲ. ಧರ್ಮದಲ್ಲಿ ಮಾದರಿಯಾಗಬಹುದಾದ, ಪೂರ್ವಿಕರ ಮಾರ್ಗವನ್ನು ಅವಲಂಬಿಸುವ ಯಾವ ವಿದ್ವಾಂಸನಿಂದಲೂ ಇದು ಉಲ್ಲೇಖಿಸಲಾಗಿಲ್ಲ. ಬದಲಾಗಿ ಇದು ಸೋಮಾರಿಗಳು ನಿರ್ಮಿಸಿದ ಬಿದ್‌ಅತ್ ಮತ್ತು ಭೋಜನಪ್ರಿಯರು ಪರಿಗಣಿಸುವ ಒಂದು ದೇಹೇಚ್ಛೆಯೂ ಆಗಿದೆ.”**(ಅಲ್‌ಹಾವಿ: 1/189)

ಶಾಫಿಈ ಮದ್‌ಹಬ್‌ನ ಪ್ರಮುಖ ಗ್ರಂಥವಾದ ‘ಇಆನತುತ್ವಾಲಿಬೀನ್’ನ ಮೂರನೇ ಭಾಗದಲ್ಲಿ ಮೌಲಿದ್‌ನ ಕುರಿತು ಹೀಗೆ ಪ್ರಸ್ತಾವಿಸಲಾಗಿದೆ. ಇಮಾಮ್ ಸಖಾವಿ(ﷺ) ಹೇಳುತ್ತಾರೆ: ಖಂಡಿತ ಮೌಲಿದ್ ಆಚರಿಸುವ ಸಂಪ್ರದಾಯ ಹಿಜಿರ ಮುನ್ನೂರರ ನಂತರ ಉಂಟಾದ ನೂತನ ಆಚಾರವಾಗಿದೆ. ಪ್ರಥಮವಾಗಿ ಪ್ರವಾದಿ ಜನ್ಮದಿನಾಚಾರಣೆಯನ್ನು ನಿರ್ಮಿಸಿರುವುದು ಇರ್ಬಲ್‌ಕಾರನಾದ ಮುಳಫ್ಫರ್ ಅಬೂ ಸಈದ್ ರಾಜನಾಗಿದ್ದಾನೆ.”(3/324)

ಸುಯೂತಿ(ﷺ) ಹೇಳುತ್ತಾರೆ:

أول من أحدث فعل ذلك - أي الإحتفال بالمولد صاحب إربل الملك المظفر (الحاوي للفتاوى- 1/189)

“ಪ್ರವಾದಿ ಜನ್ಮ ದಿನಾಚರಣೆಯನ್ನು ಮೊದಲನೆಯದಾಗಿ ಪ್ರಾರಂಭಿಸಿದವರು ಇರ್ಬಲ್ ರಾಜ ಮುಝುಫ್ಫರ್ ಆಗಿದ್ದಾರೆ.”(ಹಾವಿ ಲಿಲ್ ಫತಾವಾ 1/189)

ಅಬೂ ಶಾಮಃ(ﷺ) ಹೇಳುತ್ತಾರೆ:

ومن أحسن ما ابتدع في زماننا من هذا القبيل ، ما كان بـمدينة إربل جبرها اللَّهُ تعالى كل عام في اليوم الموافق ليوم مولد النبي صلى الله عليه وسلم من الصدقات

(والمعروف ، وإظهار الزينة والمسرور ( الباعث على إنكار البدع والحوادث: ص: 95)

ಒಬ್ಬನು ಈ ಗೋತ್ರದಿಂದ ನಮ್ಮ ಕಾಲದಲ್ಲಿ ಒಂದು ಅತ್ಯುತ್ತಮವಾದುದನ್ನು ಪ್ರಾರಂಭಿಸಿದನು,(ಉದಾ: ಮಿಲಾದುನ್ನಬಿ ಆಚರಣೆ) **ಆದರೆ ಅದು ಮದೀನದಲ್ಲಿ ಇರ್ಬಲ್ ರಾಜನು ಬರುವವರೆಗೆ ಚಾಲ್ತಿಯಲ್ಲಿರಲಿಲ್ಲ. ಅಲ್ಲಾಹನು ವರ್ಷದ ದಿನಗಳನ್ನು ಒಟ್ಟು ಗೂಡಿಸಿ ಅದರಲ್ಲೊಂದು ದಿನವನ್ನು ಪ್ರವಾದಿ(ﷺ)ರವರ ಜನನಕ್ಕಾಗಿ ಆಯ್ಕೆ ಮಾಡಿದನು. ಆ ದಿನದಂದು ದಾನ-ಧರ್ಮ ನೀಡುದಕ್ಕಾಗಲಿ ಸತ್ಕರ್ಮ ಮಾಡುವುದಕ್ಕಾಗಲಿ, ಅಲಂಕಾರ ಮತ್ತು ಸಂತೋಷ ಪ್ರಕಟಿಸುವುದಕ್ಕಾಗಿ ಯಾವುದೇ ಪ್ರತ್ಯೇಕತೆಯಿಲ್ಲ.**(ಅಲ್‌ಬಾಇಸ್ ಅಲಾ ಇಂಕಾರುಲ್ ಬಿದ್‌ಅಃ ವಲ್ ಹವಾದಿಸ್, ಪುಟ: 95)

ಯೂಸುಫ್ ರಫಾಈ(ﷺ) ಹೇಳುತ್ತಾರೆ:

إن إجتماع الناس على سماع قصة المولد النبوي الشريف ، أمر مستحدث بعد عصر النبوة ، بل

ما ظهر إلا في أوائل القرن السادس الهجري ( الرد المحكم المنيع: ص: 315)

**ಜನರನ್ನು ಒಟ್ಟು ಸೇರಿಸಿ ಮೌಲಿದ್‌ಶ್ಯರೀಫ್‌ನ ಕಥೆಯನ್ನು ಕೇಳಿಸುವುದು ನುಬುವ್ವತಿನ ಕಾಲದ ನಂತರ ಉಂಟಾದ ಒಂದು ನೂತನ ಕಾರ್ಯವಾಗಿದೆ. ಇದು ಹಿಜ್‌ರ ಆರನೇ ಶತಮಾನದ ಪ್ರಾರಂಭದಲ್ಲಲ್ಲದೆ ಪ್ರಕಟವಾಗಲಿಲ್ಲ.** (ಅರ್‍ರದ್ದುಲ್ ಮಹ್‌ಕಮುಲ್ ಮನೀಅ್: ಪುಟ: 315)

ಹಿಜ್‌ರ 600ರ ಆರಂಭದಲ್ಲಿ ತೊಡಗಿದ ಒಂದು ಸಂಪ್ರದಾಯವು ಇಸ್ಲಾಮೀ ಆಚಾರವಾಗಲು ಸಾಧ್ಯವೇ ? ಚಿಂತಿಸಿರಿ.

ಮೌಲೀದ್ ಆಚರಣೆ ಬಿದ್‌ಅತ್(ನೂತನವಾದುದು) ಆಗಿದೆಯೆಂಬುದಕ್ಕೆ ಇನ್ನಾವುದೇ ಪುರಾವೆಯ ಅಗತ್ಯವಿಲ್ಲ. ಆದ್ದರಿಂದ ಮನುಷ್ಯರನ್ನೂ ಕಲ್ಲುಗಳನ್ನೂ ಇಂಧನವಾಗಿ ಉರಿಸಲಾಗುವ ನರಕದೆಡೆಗೆ ಕೊಂಡೊಯ್ಯುವ ಬಿದ್‌ಅತಿನಿಂದ ನಾವು ದೂರವಿರೋಣ.

ಇನ್ನು ಮುಸ್ಲಿಯಾರ್‌ಗಳು ಮುಂದಿಡುವ ವಾದ: ಮೌಲಿದ್ ಒಳ್ಳೆಯ ಬಿದ್‌ಅತ್ ಆಗಿದೆ, ಒಳ್ಳೆಯ ಬಿದ್‌ಅತನ್ನು ದೀನಿನಲ್ಲಿ ಸೇರಿಸುವುದು ತಪ್ಪಲ್ಲ. ಈ ವಾದವನ್ನು ನುಚ್ಚುನೂರು ಮಾಡುತ್ತಾ ಇಬ್‌ನು ಉಮರ್(ﷺ)ಹೇಳುತ್ತಾರೆ:

( كُلُّ بِدْعَةٍ ضَلاَلَة وَإِنْ رَآهَا النَّاس حَسَنَة)

**"ಎಲ್ಲಾ ಬಿದ್‌ಅತ್‌ಗಳು ಪಥಭ್ರಷ್ಟತೆ (ದಾರಿ ತಪ್ಪಿದ್ದು) ಆಗಿದೆ. ಇನ್ನು ಜನರು ಅದನ್ನು ಒಳಿತೆಂದು ಭಾವಿಸಿದರೂ ಸರಿಯೆ."**(ದಾರಿಮಿ)

ಆದ್ದರಿಂದ ಮುಸ್ಲಿಯಾರ್‌ಗಳು ಸತ್ಕರ್ಮವೆಂದು ಭಾವಿಸಿ ಆಚರಿಸುತ್ತಿರುವ ಈದ್ ಮೀಲಾದನ್ನು ಪ್ರವಾದಿ(ﷺ)ರವರು ಕಲಿಸಿಕೊಡಲಿಲ್ಲ. ಹಾಗಿದ್ದರೂ ನಾವು ಅದನ್ನು ಇಸ್ಲಾಮಿನಲ್ಲಿ ಸೇರಿಸಬಹುದೆಂಬ ಮುಸ್ಲಿಯಾರ್‌ಗಳ ವಾದವು ಅಪಾಯಕಾರಿಯಾಗಿದೆ. ಅದು ಪ್ರವಾದಿ ನಿಂದನೆಯಾಗಿದೆ. ಈ ಮೂಲಕ ಸುನ್ನಿಗಳೆನ್ನುವ ನೂತನವಾದೀ ಮುಸ್ಲಿಯಾರ್‌ಗಳು ಪ್ರವಾದಿ ಸ್ನೇಹದ ಕಪಟ ಮುಖ ಧರಿಸಿ ಅವರನ್ನು ನಿಂದಿಸುತ್ತಾರೆ. ಆದ್ದರಿಂದ ಯಾರೆಲ್ಲಾ ಪ್ರವಾದಿ(ﷺ)ರ ನಿಂದಕರೆಂಬುದನ್ನು ಮುಸ್ಲಿಮ್ ಸಮುದಾಯವು ಮನವರಿಕೆ ಮಾಡಿಕೊಳ್ಳಬೇಕು.

## ಮೌಲಿದ್ ಕಿತಾಬ್‌ಗಳಲ್ಲಿ ಶಿರ್ಕ್

ಈ ಬಿದ್‌ಅತ್ ಆದ ಮೌಲೀದ್ ಆಚರಣೆಯ ಭಾಗವಾಗಿ ಸುನ್ನಿಗಳೆನ್ನುವವರು ಓದುವ ಮೌಲೀದ್ ಗ್ರಂಥಗಳು ಶಿರ್ಕ್, ಬಿದ್‌ಅತ್ ಮತ್ತು ಕಟ್ಟುಕಥೆಗಳಿಂದ ತುಂಬಿದೆ.

ಪ್ರಾರ್ಥನೆ ಅಲ್ಲಾಹನೊಂದಿಗೆ ಮಾತ್ರವೆಂಬುದು ಇಸ್ಲಾಮಿನ ಮೂಲ ತತ್ವವಾಗಿದೆ. ಪ್ರವಾದಿ(ﷺ)ರವರು ಕಲಿಸಿದರು: الدُّعَاءُ هُوَ العِبَادَة "ದುಆ (ಪ್ರಾರ್ಥನೆ) ಅದು ಇಬಾದತ್(ಆರಾಧನೆ) ಆಗಿದೆ"(ತಿರ್ಮಿದಿ). ಆದ್ದರಿಂದ ಅಲ್ಲಾಹೇತರರೊಂದಿಗೆ ಪ್ರಾರ್ಥಿಸುವುದು ಅಲ್ಲಾಹೇತರರಿಗೆ ಅರ್ಪಿಸುವ ಆರಾಧನೆಯಾಗಿದೆ. ಅದು ಶಿರ್ಕ್ ಆಗಿದೆ.

ಅಲ್ಲಾಹನು ಹೇಳುತ್ತಾನೆ:

﴿إِن تَدْعُوهُمْ لَا يَسْمَعُوا۟ دُعَآءَكُمْ وَلَوْ سَمِعُوا۟ مَا ٱسْتَجَابُوا۟ لَكُمْ ۖ وَيَوْمَ ٱلْقِيَٰمَةِ يَكْفُرُونَ بِشِرْكِكُمْ ۚ وَلَا يُنَبِّئُكَ مِثْلُ خَبِيرٍ ﴿١٤﴾﴾

**"ನೀವು ಅವರನ್ನು ಕರೆದು ಪ್ರಾರ್ಥಿಸುವುದಾದರೆ ಅವರು ನಿಮ್ಮ ಪ್ರಾರ್ಥನೆಯನ್ನು ಆಲಿಸಲಾರರು. ಒಂದು ವೇಳೆ ಅವರು ನಿಮ್ಮ ಪ್ರಾರ್ಥನೆಯನ್ನು ಆಲಿಸಿದರೂ ಅವರು ನಿಮಗೆ ಉತ್ತರ ನೀಡಲಾರರು. ಮತ್ತು ಪುನರುತ್ಥಾನ ದಿನದಂದು ನಿಮ್ಮ ಈ 'ಶಿರ್ಕ'ನ್ನು ಅವರು ನಿರಾಕರಿಸಿ ಬಿಡುವರು. ಸೂಕ್ಷ್ಮಜ್ಞಾನಿಯಾದ ಅಲ್ಲಾಹುವಿನಂತೆ ತಮಗೆ (ಈ ವಿವರವನ್ನು) ತಿಳಿಸಿಕೊಡುವವರಾರೂ ಇಲ್ಲ."**(ಸೂರತುಲ್ ಫಾತಿರ್: 35/14)

ಪವಿತ್ರ ಕುರ್‌ಆನ್ ಮತ್ತು ಸುನ್ನತ್ ಪ್ರತಿಪಾದಿಸುವ ಈ ಅತ್ಯುತ್ತಮ ಆಶಯವನ್ನು ಮೌಲಿದ್ ಕಿತಾಬ್‌ಗಳು ತಿರಸ್ಕರಿಸುತ್ತವೆ. ಕೆಲವು ಉದಾಹರಣೆಗಳನ್ನು ನೋಡಿರಿ.

(اِرْتَكَبْتُ عَلَى الخَطَا غَيْرَ حَصْرٍ وَعَدَدٍ ، لَكَ أَشْكُو فِيهِ يَا سَيِّدِي خَيْرَ النَّبِي)

ಅರ್ಥ: **"ಪ್ರವಾದಿ ಶಿರೋಮಣಿಗಳಲ್ಲಿ ಉತ್ಕೃಷ್ಟರಾದ ನನ್ನ ನಾಥರೇ! ಪಾಪವೆಂಬ ಕುದುರೆಯ ಮೇಲೆ ಹತ್ತಿ ಲೆಕ್ಕವಿಲ್ಲದ ಪಾಪಗಳನ್ನು ನಾನು ಮಾಡಿರುವೆನು. ಆ ವಿಷಯದಲ್ಲಿ ನಾನು ತಮ್ಮಲ್ಲಿ ನನ್ನ ಪರಿತಾಪಕರವಾದ ಅವಸ್ಥೆಯನ್ನು ವ್ಯಕ್ತಪಡಿಸುತ್ತೇನೆ."**(ಮಂಕೂಸ್ ಮೌಲಿದ್ ಕನ್ನಡ ಭಾಷಾಂತರ, ಅಲ್ ಅನ್ಸಾರ್ ಮೀಲಾದ್ ಗಿಫ್ಟ್ 1998, ಪುಟ: 3)

ಮೇಲಿನ ಮೌಲೀದ್ ಗೀತೆಯಲ್ಲಿ ಪ್ರವಾದಿ(ﷺ)ರವರೊಂದಿಗೆ ಪಾಪ ವಿಮೋಚನೆಗಾಗಿ ಪಶ್ಚಾತ್ತಾಪ ಪಡಲಾಗುತ್ತದೆ. ಆದರೆ ಪಾಪಗಳನ್ನು ಕ್ಷಮಿಸುವವನು ಅಲ್ಲಾಹು ಮಾತ್ರವೆಂದೂ, ಅವನಲ್ಲಿ ಮಾತ್ರವೇ ಕ್ಷಮೆ ಯಾಚಿಸಬೇಕೆಂದೂ ಕುರ್‌ಆನ್ ಮತ್ತು ಸುನ್ನತ್‌ಗಳು ನಮಗೆ ಕಲಿಸುತ್ತವೆ. ಕುರ್‌ಆನ್‌ನಲ್ಲಿ ಅಲ್ಲಾಹನು ಕೇಳುತ್ತಾನೆ:

﴿وَمَن يَغْفِرُ الذُّنُوبَ إِلاَّ اللهُ﴾

**"…..ಅಲ್ಲಾಹನ ಹೊರತು ಪಾಪಗಳನ್ನು ಕ್ಷಮಿಸಲು ಇನ್ನಾರಿದ್ದಾನೆ…"** (ಆಲಿ ಇಮ್ರಾನ್,3/135)

**ಮಂಕೂಸ್ ಮೌಲೀದ್‌ನ ಇನ್ನೊಂದು ಗೀತೆ ಹೀಗಿದೆ:**

(الشَّفَاعَةَ هَبْ لَنَا فِي الْقِيَامَةِ مُشْفِقًا ، وَاهْ لَنَا إِنْ ضَاعَ يَا سَيِدِي خَيْرَ النَّبِي)

ಅರ್ಥ: **"ನಬಿವರ್ಯರಲ್ಲಿ ಅತ್ಯುತ್ಕೃಷ್ಟರಾದ ನನ್ನ ಯಜಮಾನರೇ! ಅಂತ್ಯ ದಿವಸದಲ್ಲಿ ನಮ್ಮ ಮೇಲೆ ಕನಿಕರಪಟ್ಟು ನಮಗೆ ಶಫಾಅತನ್ನು ದಯಪಾಲಿಸಬೇಕು. ಅದಿಲ್ಲದಿದ್ದರೆ ನಮ್ಮ ದುಃಖ ಹಾ! ಎಷ್ಟು ಭಯಂಕರ."**(ಮಂಕೂಸ್ ಮೌಲಿದ್ ಕನ್ನಡ ಭಾಷಾಂತರ, ಅಲ್ ಅನ್ಸಾರ್ ಮೀಲಾದ್ ಗಿಫ್ಟ್ 1998, ಪುಟ–3)

ಪ್ರವಾದಿ(ﷺ)ರವರು ಸತ್ಯವಿಶ್ವಾಸಿಗಳಿಗೆ ಪರಲೋಕದಲ್ಲಿ ಶಫಾಅತ್ ಮಾಡುವರೆಂಬುದು ಸತ್ಯವಾಗಿದೆ. ಅದು ಕುರ್‌ಆನ್ ಮತ್ತು ಸುನ್ನತಿನಿಂದ ದೃಢೀಕರಿಸಲ್ಪಟ್ಟಿರುವುದರಿಂದ ಸಲಫಿಗಳು ಅದನ್ನು ಅಂಗೀಕರಿಸುತ್ತಾರೆ. ಆದರೆ ಆ ಶಫಾಅತನ್ನು ನಮಗೆ ಒದಗಿಸಲು ನಾವು ಅಲ್ಲಾಹನಲ್ಲಿ ಮಾತ್ರ ಪ್ರಾರ್ಥಿಸಬೇಕು. ಯಾಕೆಂದರೆ ಪ್ರಾರ್ಥನೆ ಆರಾಧನೆಯಾಗಿದೆ.

ಅಲ್ಲಾಹೇತರರೊಂದಿಗೆ ಪ್ರಾರ್ಥಿಸುವ ಇಂತಹ ಹಲವು ಗೀತೆಗಳನ್ನು ಮೌಲಿದ್ ಕಿತಾಬ್‌ಗಳಲ್ಲಿ ಕಾಣಬಹುದು. ಅಲ್ಲಾಹೇತರರೊಂದಿಗೆ ಪ್ರಾರ್ಥಿಸುವವರನ್ನು ಅತ್ಯಂತ ಪಥಭ್ರಷ್ಟರೆಂದು ಕುರ್‌ಆನ್ ಕರೆದಿದೆ.

﴿وَمَنْ أَضَلُّ مِمَّن يَدْعُواْ مِن دُونِ ٱللَّهِ مَن لَّا يَسْتَجِيبُ لَهُۥٓ إِلَىٰ يَوْمِ

ٱلْقِيَـٰمَةِ وَهُمْ عَن دُعَآئِهِمْ غَـٰفِلُونَ ﴿٥﴾

**"ಅಲ್ಲಾಹನ ಹೊರತು ಪುನರುತ್ಥಾನದ ದಿನದವರೆಗೆ ತನಗೆ ಉತ್ತರ ನೀಡದವರನ್ನು ಕರೆದು ಪ್ರಾರ್ಥಿಸುವವನಿಗಿಂತ ಹೆಚ್ಚು ಪಥಭ್ರಷ್ಟನು ಇನ್ನಾರಿರುವನು? ಅವರು ಇವರ ಪ್ರಾರ್ಥನೆಯ ಕುರಿತು ಅಲಕ್ಷ್ಯರಾ ಗಿರುವರು."**(ಸೂರಃ ಅಹ್‌ಖಾಫ್: 46/5)

ಮೌಲೀದ್ ಕಿತಾಬ್ ಪ್ರವಾದಿಗಳಿಗೆ ವಿರುದ್ಧ: ಗತ ಪ್ರವಾದಿಗಳು ರಸೂಲ್(ﷺ)ರವರಲ್ಲಿ ಪ್ರಾರ್ಥಿಸಿದರೆಂದೂ, ರಸೂಲ್(ﷺ)ರವರನ್ನು ತವಸ್ಸುಲ್ ಮಾಡಿ ಪ್ರವಾದಿಗಳು ಪ್ರಾರ್ಥಿಸಿದರೆಂದೂ ಇಂತಹ ಕಟ್ಟುಕಥೆಯನ್ನು ನಿರ್ಮಿಸಿ ಮೌಲಿದ್ ಕಿತಾಬ್‌ಗಳ ಮೂಲಕ ಮುಸ್ಲಿಯಾರ್‌ಗಳು ಪ್ರಚಾರ ಮಾಡುತ್ತಾರೆ. ಕೆಲವು ಉದಾಹರಣೆಗಳನ್ನು ನೋಡಿರಿ:

(أَلاَ هُوَ الَّذِي تَوَسَّلَ بِهِ آدَمُ وَافْتَخَرَ بِكَوْنِهِ وَالِدًا)

"ತಿಳಿಯಿರಿ! ಹಝ್ರತ್ ಆದಮ್(عليه السلام)ರು ನಬಿ(ಸಲ್ಲಲ್ಲಾಹು ಅಲೈಹಿ ವಸಲ್ಲಂ)ಯವರನ್ನು ತವಸ್ಸುಲ್(ಮಧ್ಯವರ್ತಿಯನ್ನಾಗಿ) ಮಾಡಿ ಅಲ್ಲಾಹುವಿನಲ್ಲಿ ಪ್ರಾರ್ಥಿಸಿರುವರು."(ಮಂಕೂಸ್ ಮೌಲಿದ್ ಕನ್ನಡ ಬಾಷಾಂತರ, ಅಲ್ ಅನ್ಸಾರ್ ಮೀಲಾದ್ ಗಿಫ್ಟ್ 1998, ಪುಟ 1)

ಆದರೆ ಹಝ್ರತ್ ಆದಮ್(عليه السلام)ರವರು ನೇರವಾಗಿ ಅಲ್ಲಾಹನಲ್ಲಿ ಪ್ರಾರ್ಥಿಸಿದರೆಂದು ಕುರ್‌ಆನ್ ನಮಗೆ ಕಲಿಸುತ್ತದೆ. ಆದಮ್ ನಬಿ(عليه السلام)ರವರ ಪ್ರಾರ್ಥನೆ ಕುರ್‌ಆನಿನಲ್ಲಿ ಹೀಗಿದೆ:

﴿قَالَا رَبَّنَا ظَلَمْنَآ أَنفُسَنَا وَإِن لَّمْ تَغْفِرْ لَنَا وَتَرْحَمْنَا لَنَكُونَنَّ مِنَ ٱلْخَـٰسِرِينَ ﴿٢٣﴾﴾

"ಅವರಿಬ್ಬರೂ ಹೇಳಿದರು:

**"ನಮ್ಮ ಪ್ರಭೂ! ನಾವು ಸ್ವತಃ ನಮ್ಮೊಂದಿಗೇ ಅಕ್ರಮವೆಸಗಿರುವೆವು. ನೀನು ನಮ್ಮನ್ನು ಕ್ಷಮಿಸದಿದ್ದರೆ ಮತ್ತು ನಮಗೆ ಕರುಣೆ ತೋರದಿದ್ದರೆ ಖಂಡಿತವಾಗಿಯೂ ನಾವು ನಷ್ಟ ಹೊಂದಿದವರಲ್ಲಿ ಸೇರಿದವರಾಗುವೆವು.**(ಸೂರಃ ಅಲ್‌ರಾಫ್: 7/23)

ಇನ್ನೊಂದು ಸುಳ್ಳನ್ನು ನೋಡಿರಿ:

(وَاسْتَغَاثَ بِهِ نُوحٌ فَنَجَى مِنَ الرَّدَى)

**"ಆ ನಬಿ(ಸಲ್ಲಲ್ಲಾಹು ಅಲೈಹಿ ವಸಲ್ಲಂ) ಯವರಲ್ಲಿ ಹಝ್ರತ್ ನೂಹ್ ನಬಿಯವರು ಇಸ್ತಿಗಾಸ (ಖುದ್ದು ಸಹಾಯಾಭ್ಯರ್ಥನೆ) ಮಾಡಿದರು. ಹಾಗೂ ಅವರು ವಿನಾಶದಿಂದ ರಕ್ಷೆ ಪಟ್ಟರು."**(ಮಂಕೂಸ್ ಮೌಲಿದ್ ಕನ್ನಡ ಭಾಷಾಂತರ, ಅಲ್ ಅನ್ಸಾರ್ ಮೀಲಾದ್ ಗಿಫ್ಟ್ 1998, ಪುಟ 1)

ಆದರೆ ಪ್ರವಾದಿ ನೂಹ್(عليه السلام)ರವರು ಅಲ್ಲಾಹನಲ್ಲಿ ಪ್ರಾರ್ಥಿಸಿದರೆಂದೂ, ಅಲ್ಲಾಹನು ಅವರನ್ನು ರಕ್ಷಿಸಿದನೆಂದೂ ಕುರ್‌ಆನ್ ಹೇಳುತ್ತದೆ:

﴿وَلَقَدْ نَادَىٰنَا نُوحٌ فَلَنِعْمَ ٱلْمُجِيبُونَ ﴿٧٥﴾ وَنَجَّيْنَٰهُ وَأَهْلَهُۥ مِنَ ٱلْكَرْبِ ٱلْعَظِيمِ ﴿٧٦﴾﴾

**"ನೂಹ್ ನಮ್ಮನ್ನು ಕರೆದರು. ಆಗ ಉತ್ತರ ನೀಡಿದವನು ಎಷ್ಟು ಉತ್ತಮನು. ಅವರನ್ನೂ ಅವರ ಜನರನ್ನೂ ನಾವು ಮಹಾ ದುರಂತದಿಂದ ರಕ್ಷಿಸಿದೆವು."** (ಸೂರತು ಸ್ವಾಫಾತ್: 37/76)

ಪ್ರವಾದಿ ಇಬ್‌ರಾಹೀಮ್(عليه السلام)ಯರವರ ಹೆಸರಲ್ಲಿ ಮಂಕೂಸ್ ಮೌಲೀದ್‌ನಲ್ಲಿರುವ ಕಟ್ಟು ಕಥೆಯನ್ನು ನೋಡಿರಿ:

(وَكَانَ فِي صُلْبِ إِبْرَاهِيمَ عليه السلام حِينَ أُلْقِيَ فِي النَّارِ فَعَادَ وَصَارَ لَهِيبُهَا مُخْمَدًا)

**"ಹಝ್ರತ್ ಇಬ್ರಾಹೀಂ ನಬಿ(عليه السلام)ಯವರು ಅಗ್ನಿಗೆ ಎಸೆಯಲ್ಪಟ್ಟಾಗ ತನ್ನ ಬೆನ್ನಿನಲ್ಲಿ ನಬಿ(ಸಲ್ಲಲ್ಲಾಹು ಅಲೈಹಿ ವಸಲ್ಲಂ)ಯವರು (ಪ್ರಕಾಶ ರೂಪದಲ್ಲಿ) ಇದ್ದ ಕಾರಣ ಆ ಅಗ್ನಿ ನಂದಿ ಹೋಯಿತು."**(ಮಂಕೂಸ್ ಮೌಲಿದ್, ಕನ್ನಡ ಭಾಷಾಂತರ, ಅಲ್ ಅನ್ಸಾರ್ ಮೀಲಾದ್ ಗಿಫ್ಟ್ 1998, ಪುಟ 1)

ಆದರೆ ಕುರ್‌ಆನ್ ಹೇಳುತ್ತದೆ:

﴿قُلْنَا يَا نَارُ كُونِي بَرْدًا وَسَلَامًا عَلَىٰ إِبْرَاهِيمَ﴾

**"ನಾವು(ಅಲ್ಲಾಹು) ಹೇಳಿದೆವು: ಓ ಬೆಂಕಿಯೇ!, ನೀನು ಇಬ್ರಾಹೀಮರಿಗೆ ತಣ್ಣಗಾಗಿ ಬಿಡು ಮತ್ತು ಇಬ್‌ರಾಹೀಮ್‌ರ ಪಾಲಿಗೆ ಸುರಕ್ಷೆಯಾಗು."** (ಸೂರತುಲ್ ಅಂಬಿಯಾ, 21/69)

ಮಂಕೂಸ್ ಮತ್ತು ಇತರ ಮೌಲಿದ್‌ಗಳಲ್ಲಿ ಪ್ರವಾದಿಗಳ ಹೆಸರಲ್ಲೇ ಇಂತಹ ಸುಳ್ಳುಗಳಿರುವುದರಿಂದ ಮೌಲೀದ್ ಗ್ರಂಥಗಳು ಪ್ರವಾದಿಗಳಿಗೇ ವಿರುದ್ಧವಾಗಿವೆ. ಪ್ರವಾದಿಗಳಿಗೆ ವಿರುದ್ಧವಿರುವ ಚರಿತ್ರೆಯನ್ನು ಅಂಗೀಕರಿಸುವುದು ಸತ್ಯವಿಶ್ವಾಸಿಗಳಿಗೆ ಭೂಷಣವಲ್ಲ. ಅದು ಯಹೂದಿಗಳ ಲಕ್ಷಣವಾಗಿದೆ.

## ಮೌಲಿದ್ ಕಿತಾಬಿನಲ್ಲಿರುವ ಇನ್ನಿತರ ಕೆಲವು ಕಟ್ಟುಕಥೆಗಳು

ಪ್ರವಾದಿ ಮುಹಮ್ಮದ್(ﷺ)ರವರ ಹೆಸರಲ್ಲಿ ಸುಳ್ಳನ್ನು ಹೇಳುವುದು ಸತ್ಯವಿಶ್ವಾಸಿಯ ಲಕ್ಷಣವಲ್ಲ. ಪ್ರವಾದಿ(ﷺ)ರವರ ಹೆಸರಲ್ಲಿ ಸತ್ಯವನ್ನು ಮಾತ್ರ ಹೇಳಿ ಅವರನ್ನು ಪ್ರೀತಿಸುವುದು ಸತ್ಯವಿಶ್ವಾಸಿಯ ಲಕ್ಷಣವಾಗಿದೆ. ಅದುವೇ ನೈಜ

ಪ್ರವಾದಿ ಸ್ನೇಹ. ಆದರೆ ಪ್ರವಾದಿ ಸ್ನೇಹದ ಹೆಸರಲ್ಲಿ ಮುಸ್ಲಿಯಾರ್‌ಗಳು ಓದಿ, ಜನರಿಂದ ಓದಿಸಿ ಹೊಟ್ಟೆ ಮತ್ತು ಜೇಬು ತುಂಬಿಸುವ ಮೌಲಿದ್‌ಗಳಲ್ಲಿ ಪ್ರವಾದಿಗಳ ಹೆಸರಲ್ಲಿ ಹಲವು ಕಟ್ಟು ಕಥೆಗಳಿವೆ. ಒಂದೆರಡು ಉದಾಹರಣೆಗಳನ್ನು ನೋಡಿರಿ:

(وَأَوْجَدَ نُورَهُ قَبْلَ خَلْقِ الْعَالَمِ وَسَمَّاهُ مُحَمَّدًا)

**"ಅವನು ಸಮಸ್ತ ಲೋಕವನ್ನು ಸೃಷ್ಟಿಸುವುದಕ್ಕೆ ಮುಂಚೆಯೇ ನಬಿ (ಸಲ್ಲಲ್ಲಾಹು ಅಲೈಹಿ ವಸಲ್ಲಂ)ಯವರ ಪ್ರಕಾಶವನ್ನು ಸೃಷ್ಟಿಸಿ ಅದಕ್ಕೆ ಮುಹಮ್ಮದ್ ಎಂದು ನಾಮಕರಣ ಮಾಡಿರುವನು."**(ಮಂಕೂಸ್ ಮೌಲಿದ್, ಕನ್ನಡ ಭಾಷಾಂತರ, ಅಲ್ ಅನ್ಸಾರ್ ಮೀಲಾದ್ ಗಿಫ್ಟ್ 1998, ಪುಟ 1)

(كُنْتُ نُورًا بَيْنَ يَدَيِ اللَّهِ عَزَّوَجَلَّ قَبْلَ أَنْ يَخْلُقَ آدَمَ بِأَلْفَيْ عَامٍ)

**"ನಬಿ ﷺ)ಯವರಿಂದ ನಿವೇದನೆ ಮಾಡಲ್ಪಟ್ಟಿದೆ: ನಾನು ಪರಿಶುದ್ಧನಾದ ಅಲ್ಲಾಹುವಿನ ಸನ್ನಿಧಿಯಲ್ಲಿ ಆದಮ್ ನಬಿ(عليه السلام)ಯವರನ್ನು ಸೃಷ್ಟಿಸುವುದಕ್ಕಿಂತ ಎರಡು ಸಾವಿರ ವರ್ಷಗಳ ಮುಂಚೆಯೇ ಒಂದು ಪ್ರಕಾಶವಾಗಿದ್ದೆ." (ಮಂಕೂಸ್ ಮೌಲಿದ್, ಕನ್ನಡ ಭಾಷಾಂತರ, ಅಲ್ ಅನ್ಸಾರ್ ಮೀಲಾದ್ ಗಿಫ್ಟ್ 1998, ಪುಟ 2)**

ಮಾನವರ ಪೈಕಿ ಅಲ್ಲಾಹನು ಪ್ರಥಮವಾಗಿ ಸೃಷ್ಟಿಸಿರುವುದು ಆದಮ್(عليه السلام) ರವರನ್ನು ಎಂಬ ಸರ್ವಾಂಗೀಕೃತವಾದ ಇಸ್ಲಾಮಿನ ತತ್ವಕ್ಕೇ ಇದು ವಿರುದ್ಧವಾಗಿದೆ.

ಪ್ರವಾದಿ ಮುಹಮ್ಮದ್( ﷺ)ರವರ ತಾಯಿ ಆಮೀನಾರ ಬಳಿ ಮಲಕ್‌ಗಳೂ ಪ್ರವಾದಿಗಳೂ ಬಂದರೆಂಬ ಹಸಿ ಹಸಿ ಸುಳ್ಳನ್ನು ಯಾವುದೇ ಲಜ್ಜೆಯಿಲ್ಲದೇ ಪುರೋಹಿತರು ಮಂಕೂಸ್ ಮೌಲಿದ್‌ನಲ್ಲಿ ತುರುಕಿದ್ದಾರೆ. ಅದು ಹೀಗಿದೆ:

"ನೀನು ಆಗ್ರಹಿಸುವಂತಹ ಆಗ್ರಹದ ಪೂರ್ಣತೆಯನ್ನು ಪ್ರಾಪ್ತಿಸಿರುವೆ ಎಂಬ ಮಲಕುಗಳ ಸಂತೋಷ ವಾರ್ತೆಯನ್ನು ಶವ್ವಾಲ್ ತಿಂಗಳಲ್ಲಿ ಆಮಿನಾ ಬೀಬಿ ಆಲಿಸಿದರು. ಉನ್ನತ–ಗೌರವ ಮತ್ತು ಪ್ರಕಾಶವುಳ್ಳ ಆ ಪುಣ್ಯ ಶಿಶು ನಿಮಿತ್ತ ನೀವು ಸಂತುಷ್ಟರಾಗಿರಿ ಎಂಬ ದಿವ್ಯ ವಾಣಿ ತಿಳಿಸಲಿಕ್ಕೆ ಬಂದ ಖಲೀಲ್ ಆದ ಇಬ್ರಾಹೀಮ್ ನಬಿ(عليه السلام)ಯವರನ್ನು ದುಲ್‌ಖಅದ್ ತಿಂಗಳಲ್ಲಿ ಬೀಬಿ ಕಂಡಿದ್ದರು. ಮುಹಮ್ಮದ್ ನಬಿ(ಸಲ್ಲಲ್ಲಾಹು ಅಲೈಹಿ ವಸಲ್ಲಂ)ಯವರ ಬಹುಮಾನ್ಯತೆ ಮತ್ತು ಉನ್ನತ ಸ್ಥಾನಗಳ ಕುರಿತುಳ್ಳ ಸಂತೋಷದ ಸುದ್ದಿಯನ್ನು ತಿಳಿಸಲು ದ್ಸುಲ್‌ಹಜ್ಜ್ ತಿಂಗಳಲ್ಲಿ ಕಲೀಮಾದ ಮೂಸಾ ನಬಿ(عليه السلام)ಯವರು ಬಂದಿದ್ದರು. ಮುಹರ್ರಮ್ ತಿಂಗಳಲ್ಲಿ ಜಿಬ್‌ರೀಲ್(عليه السلام) ಬಂದು ಶುಭ ಪ್ರಸವದ ಸಮಯ ನಿಶ್ಚಯವಾಗಿ ಆಸನ್ನವಾಗಿದೆಯೆಂಬ ಸಂತೋಷ ವಾರ್ತೆಯನ್ನು ಬೀಬಿಗೆ ತಿಳಿಸಿದರು." **(ಮಂಕೂಸ್ ಮೌಲಿದ್ ಕನ್ನಡ ಭಾಷಾಂತರ, ಅಲ್ ಅನ್ಸಾರ್ ಮೀಲಾದ್ ಗಿಫ್ಟ್ 1998, ಪುಟ 4)**

ಈ ಕಥೆಗಳಿಗೆ ಸಹೀಹ್ ಆದ ಸನದ್‌ನ ಮೂಲಕ ಉಲ್ಲೇಖಿತವಾದ ಯಾವುದೇ ಹದೀಸ್‌ಗಳಿಲ್ಲ. ಇವು ಕೇವಲ ಕಟ್ಟು ಕಥೆಗಳಾಗಿವೆ. ಪ್ರವಾದಿ(ﷺ) ರವರ ಹೆಸರಲ್ಲಿ ಯಾರಾದರೂ ಸುಳ್ಳನ್ನು ಹೇಳಿದರೆ ಅವನ ಸ್ಥಾನ ನರಕವೆಂದು ಪ್ರವಾದಿ(ﷺ)ರವರೇ ಹೇಳಿದ್ದಾರೆ. ಆದುದರಿಂದ ಕಟ್ಟುಕಥೆಗಳಿಂದ ದೂರವಾಗಿ ಸತ್ಯಯದೆಡೆಗೆ ಮರಳಿರಿ.

## ವಿಗ್ರಹದೊಂದಿಗೆ ಪ್ರಾರ್ಥಿಸಿದ ಮುಶ್ರಿಕರ ಶೋಕ ಗೀತೆ ಮೌಲೀದ್‌ನಲ್ಲಿ

ಮಂಕೂಸ್ ಮೌಲಿದ್ ಹೀಗೆನ್ನುತ್ತದೆ: "ಈ ರೀತಿ ಹೇಳಲ್ಪಟ್ಟಿದೆ: ಎರಡು ಸಾವಿರ ವರ್ಷಗಳಿಗಿಂತ ಮುಂಚೆಯೇ ಒಂದು ಸಮಯದಲ್ಲಿ ನಂದಿ ಹೋಗದ ಪರ್ಶಿಯಾ ದೇಶದವರ ಬೆಂಕಿಯ ಜ್ವಾಲೆಗಳು ನಬಿ(ಸಲ್ಲಲ್ಲಾಹು ಅಲೈಹಿ ವಸಲ್ಲಂ) ಯವರ ಜನನವಾದ ಅದೇ ರಾತ್ರಿ ತಾನಾಗಿಯೇ ನಂದಿ ಹೋದವು. ಕಿಸ್ರಾ ಚಕ್ರವರ್ತಿಯ ಕೋಟೆಗಳು ಒಡೆದು ನುಚ್ಚು ನೂರಾದವು. ಅದರಿಂದ ಹದಿನಾಲ್ಕು ಗೋಪುರಗಳು ನೆಲ ಕಚ್ಚಿದವು. ಸಾವ ತಟಾಕದ ನೀರು ತನ್ನಷ್ಟಕ್ಕೆ ಬತ್ತಿ ಹೋದವು. ಲೋಕದಲ್ಲಿರುವ ಎಲ್ಲಾ ಪ್ರತಿಮೆಗಳು ತಲೆಕೆಳಗಾಗಿ ನೆಲಕ್ಕೆ ಉರುಳಿಸಲ್ಪಟ್ಟವು..." (ಮಂಕೂಸ್ ಮೌಲಿದ್, ಕನ್ನಡ ಭಾಷಾಂತರ, ಅಲ್ ಅನ್ಸಾರ್ ಮೀಲಾದ್ ಗಿಫ್ಟ್ 1998, ಪುಟ 7)

ಈ ಕಟ್ಟು ಕಥೆಗೆ ಮುಸ್ಲಿಯಾರ್‌ಗಳ ಲೇಖನಿ ಮತ್ತು ನಾಲಗೆಯ ಹೊರತು ಸ್ವಹೀಹ್ ಆದ ಯಾವುದೇ ಪುರಾವೆ ಇಲ್ಲ. ನುಬುವ್ವತ್ ಎಂಬ ಅನುಗ್ರಹದ ಮೂಲಕ ಸರ್ವಲೋಕಗಳಿಗೆ ಅನುಗ್ರಹವಾಗಿ ಅಲ್ಲಾಹನು ನಿಯೋಗಿಸಿದ ಪ್ರವಾದಿ(ﷺ)ರವರ ಜನನದಿಂದ ಕಿಸ್ರಾ ಚಕ್ರವರ್ತಿಯ ಕೋಟೆ ಒಡೆಯಿ ತೆಂದಾಗಲೀ, ಒಂದು ಹನಿ ನೀರಾದರೂ ಬತ್ತಿತೆಂದಾಗಲೀ ನಂಬಲು ಮುಸ್ಲಿಯಾ ರ್‌ಗಳ ಹೊರತು, ಪ್ರವಾದಿ ಸ್ನೇಹಿಗಳಾದ ಮುಸ್ಲಿಮರಿಗೆ ಸಾಧ್ಯ.ವಿಲ್ಲ.

ಆ ಬಳಿಕ ಮೇಲಿನ ಕತೆ ಹೀಗೆ ಮುಂದುವರಿಯುತ್ತದೆ: ".. .. .. .. ಆಗ ಅವರಲ್ಲೊಬ್ಬನಾದ ಉಸ್ಮಾನ್ ಬಿನ್ ಹುವೈರಿಸ್ ಎಂಬವರು ಆ ವಿಗ್ರಹಕ್ಕೆ ಅಭಿಮುಖವಾಗಿ ನಿಂತು, ಇದಕ್ಕೇನಾಗಿದೆ ? ಇದು ಯಾವ ಕಾರಣ ಎಲ್ಲಾ ಸಲವೂ ತಲೆ ಕೆಳಗೆ ಮಾಡಿ ಬಿದ್ದದ್ದು? ಖಂಡಿತವಾಗಿ ಇದು ಈಗ ಸಂಭವಿಸಿದ ಆ ಹೊಸ ಕಾರಣದಿಂದ ಉಂಟಾದದ್ದಾಗಿದೆ ಎಂದು ಹೇಳಿ ಅವರು ಶೋಕಗೀತೆ ಹಾಡಲಿಕ್ಕೆ ಶುರು ಮಾಡಿದರು.. .. .. .. .. ಈ ಹಬ್ಬದ ಸುದಿನದಲ್ಲಿ ಸಮೀಪ ಮತ್ತು ದೂರವುಳ್ಳ ಯೋಗ್ಯಸ್ಥರು ಬಂದು ಸುತ್ತ ಮುತ್ತಲಲ್ಲಿ ಕೂಟ ಕೂಟವಾಗಿ ನಿಂತು ಭಜನೆ ಮಾಡಲ್ಪಡುವ ಮೂರ್ತಿಯೇ!.. .. .... .. .. .. ನೀನು ತಲೆ ಕೆಳಗಾಗಿ ಬಿದ್ದದ್ದು ನಾವು ಮಾಡಿದ ಪಾಪ ಕಾರಣದಿಂದಾದರೆ ಅದನ್ನು ಸಮ್ಮತಿಸಿಕೊಂಡು ಪಶ್ಚಾತ್ತಾಪಿಸುತ್ತೇವೆ.. .. .. .." (ಮಂಕೂಸ್ ಮೌಲಿದ್ ಕನ್ನಡ

ಭಾಷಾಂತರ, ಅಲ್ ಅನ್ಸಾರ್ ಮೀಲಾದ್ ಗಿಫ್ಟ್ 1998, ಪುಟ 7–8). ಆ ಬಳಿಕ ವಿಗ್ರಹದ ಒಳಭಾಗದಿಂದ ಮೂರು ಕವಿತೆಗಳು ಕೇಳಿಸಿತೆಂದೂ ಮಂಕೂಸ್ ಮೌಲಿದಿನಲ್ಲೇ ಇದೆ.

ಆ ಮುಶ್ರಿಕರು ಹಾಡಿದ ಶಿರ್ಕ್‌ನ ಗೀತೆಯನ್ನು, ಮುಸ್ಲಿಮ್ ಸಮುದಾಯದ ಅನ್ನವನ್ನು ಉಂಡು ಬೆಳೆಯುತ್ತಿರುವ ಮುಸ್ಲಿಯಾರ್‌ಗಳು, ಮುಸ್ಲಿಮರಿಂದಲೇ ಹಾಡಿಸುತ್ತಾ ಜನರ ಜೇಬನ್ನೂ, ಈಮಾನನ್ನೂ ಕೊಳ್ಳೆ ಹೊಡೆಯುತ್ತಿದ್ದಾರೆ. ಸತ್ಯವಿಶ್ವಾಸಿಗಳೇ, ಮುಸ್ಲಿಯಾರ್‌ಗಳನ್ನು ಅಂಧವಾಗಿ ಅನುಸರಿಸುವುದನ್ನು ಕೈಬಿಟ್ಟು ಕುರ್‌ಆನ್ ಮತ್ತು ಸುನ್ನತಿನ ಪ್ರಕಾಶದೆಡೆಗೆ ಮರಳಿರಿ. ಪರಲೋಕದಲ್ಲಿ ರಕ್ಷೆ ಹೊಂದಬಹುದು.

## ಮಂಕೂಸ್ ಮೌಲೀದ್ ಕೇರಳ ಮತ್ತು ಕರ್ನಾಟಕದಲ್ಲಿ ಮಾತ್ರ

ಕುರ್‌ಆನ್ ಮತ್ತು ಸುನ್ನತ್ ಕಲಿಸಿದ ದ್ಸಿಕ್ರ್, ದುಆ ಇತ್ಯಾದಿಗಳೆಲ್ಲವೂ ಲೋಕದಾದ್ಯಂತವಿರುವ ಮುಸ್ಲಿಮರಿಗೆ ಅಂತಿಮ ದಿನದ ವರೆಗೂ ಒಂದೇ ಆಗಿದೆ. ಉದಾ: ನಮಾಝಿನ ದುಆ, ಮಲಗುವಾಗ ಹೇಳುವ ದುಆ ಇತ್ಯಾದಿ ಸರ್ವವನ್ನೂ ಪ್ರವಾದಿ(ﷺ)ರವರು ಕಲಿಸಿದ್ದಾರೆ. ಅವೆಲ್ಲವೂ ದೇಶ–ಭಾಷೆಯ ವ್ಯತ್ಯಾಸವಿಲ್ಲದೇ ಎಲ್ಲ ಕಡೆಯೂ ಒಂದೇ ಆಗಿದೆ, ವ್ಯತ್ಯಸ್ಥವಲ್ಲ. ಆದರೆ ಪ್ರವಾದಿ ಸ್ನೇಹದ ಹೆಸರಲ್ಲಿ ನಮ್ಮೂರಲ್ಲಿ ಪ್ರಚಲಿತವಿರುವ ಮಂಕೂಸ್ ಮೌಲಿದ್ ಕೇವಲ ಕೇರಳ ಮತ್ತು ಕರ್ನಾಟದಲ್ಲಿ ಮಾತ್ರ ಇರುವುದೆಂದು ಅದರ ಪ್ರಚಾರಕರೇ ಬರೆಯುವುದನ್ನು ನೋಡಿರಿ:

**"ಮೌಲೀದ್‌ನಲ್ಲಿ ಅದರಲ್ಲೂ ಮುಖ್ಯವಾಗಿ ಈಗ <u>ಕೇರಳ ಮತ್ತು ಕರ್ನಾಟಕದಲ್ಲಿ ಚಾಲ್ತಿಯಲ್ಲಿರುವ ಮಂಕೂಸ್ ಮೌಲಿದ್‌ನಲ್ಲಿ</u> ನೂತನವಾದಿಗಳೆನ್ನುವಂತೆ ಶಿರ್ಕ್ ಅಥವಾ ಬಿದ್‌ಅತ್‌ನ ಅಂಶಗಳಿಲ್ಲ."**(ಅಲ್ ಅನ್ಸಾರ್, ಆಗಸ್ಟ್ 15–28, 1995)

ಶಿರ್ಕ್‌ನಿಂದ ತುಂಬಿದ ಮಂಕೂಸ್ ಮೌಲಿದ್‌ನಲ್ಲಿ ಶಿರ್ಕ್ ಇಲ್ಲವೆಂದು ಸುಳ್ಳು ಹೇಳುವಾಗ ಇನ್ನೊಂದು ಸತ್ಯ ಹೊರಬಿತ್ತು. ಶಿರ್ಕ್–ಬಿದ್‌ಅತ್‌ಗಳು ಎಷ್ಟು ಬಲಹೀನ. ಒಂದನ್ನು ಮುಚ್ಚುವಾದ ಇನ್ನೊಂದು ಹೊರ ಬರುತ್ತದೆ. ಕೇವಲ ಕೇರಳ ಮತ್ತು ಕರ್ನಾಟಕದಲ್ಲಿ ಮಾತ್ರವಿರುವುದು ಹೇಗೆ ಪ್ರವಾದಿ ಚರ್ಯೆಯಾಗುತ್ತದೆ ? ಹಾಗಿದ್ದರೆ ಮುಸ್ಲಿಯಾರ್‌ಗಳು ಪ್ರತಿಪಾದಿಸುವ ಸುನ್ನಿಸಮ್ ಕೇರಳ–ಕರ್ನಾಟಕಕ್ಕೆ ಮಾತ್ರ ಸೀಮಿತವೇ ?

**ಇಸ್ಲಾಮಿನ ಬದ್ಧ ವೈರಿ ಅಬೂಲಹಬ್‌ನ ಪ್ರವಾದಿ ಸ್ನೇಹ ಮೌಲೀದ್‌ಗೆ ಪುರಾವೆ(?)**

ಸುನ್ನಿಗಳೆನ್ನುವವರ ಮುಖ ಪತ್ರಿಕೆ ಬರೆಯುತ್ತದೆ: "ಪ್ರವಾದಿವರ್ಯರು(ﷺ) ಜನಿಸಿದ ಶುಭವಾರ್ತೆ ಕೇಳಿ ದೊಡ್ಡಪ್ಪ ಅಬೂಲಹಬ್ ತನ್ನ ವಂಶದಲ್ಲಿ ಗಂಡು ಮಗು ಜನಿಸಿದ ಸಂತಸಕ್ಕೆ ಓರ್ವ ದಾಸಿಯನ್ನು ಜೀತ ಮುಕ್ತಗೊಳಿಸಿದ್ದ. ಮುಂದೆ ಅಬೂಲಹಬ್ ವೈರಿಯಾದ. ಕಡು ದುಷ್ಟನಾದ. ಆದರೂ ಅವನಿಗೆ ಪ್ರವಾದಿ ವರ್ಯರು(ﷺ) ಜನಿಸಿದ ಪ್ರತೀ ಸೋಮವಾರ ದಿನ ನರಕ ಶಿಕ್ಷೆ ಇಳಿಮುಖ ವಾಗುವುದೆಂದು ಸಾಬೀತಾಗಿದೆ."(ಅಲ್ ಅನ್ಸಾರ್, ಆಗಸ್ಟ್ 15–28, 1995, ಪುಟ 6)

ಅದರೆ ಅಬೂಲಹಬ್‌ನಿಗೆ ಶಾಪ ಪ್ರಾರ್ಥನೆ ಮಾಡಬೇಕೆಂಬ ಕುರ್‌ಆನಿನ ಸಂದೇಶವನ್ನು ನೋಡಿರಿ:

﴿ تَبَّتْ يَدَآ أَبِى لَهَبٍ وَتَبَّ ﴿١﴾ ﴾

**"ಅಬೂಲಹಬನ ಎರಡು ಕೈಗಳೂ ನಾಶವಾಗಲಿ. ಮತ್ತು ಅವನು ನಾಶವಾದನು."**

ಯಾವುದನ್ನು ಸ್ವೀಕರಿಸಬೇಕು ? ಕುರ್‌ಆನಿನ ಸಂದೇಶವನ್ನೋ ? ಮುಸ್ಲಿ ಯಾರ್‌ಗಳ ಸಂದೇಶವನ್ನೋ ?

**ಪ್ರವಾದಿ(ﷺ)ರವರು ಉಪವಾಸ ಆಚರಿಸಲು ಹೇಳಿದ ವಚನ ಮೃಷ್ಟಾನ್ನ ಭೋಜನಕ್ಕೆ ಪುರಾವೆ!!**

ಸೋಮವಾರದ ಉಪವಾಸದ ಕುರಿತು ಪ್ರವಾದಿ(ﷺ)ರವರಲ್ಲಿ ಕೇಳಲಾಯಿತು:

(فَقَالَ: فِيهِ وُلِدْتُ وَفِيهِ أُنْزِلَ عَلَيَّ)

"ಆಗ ಅವರು ಹೇಳಿದರು: ಅದು ನನ್ನ ಜನನ ಮತ್ತು ನನಗೆ ವಹ್ಯ್ ಅವತೀರ್ಣವಾಗಲು ಪ್ರಾರಂಭವಾದ ದಿನವಾಗಿದೆ"(ಮುಸ್ಲಿಂ)

ಆದರೆ ಇದನ್ನು ಮೀಲಾದುನ್ನಬಿ ಆಚರಿಸಲು ಅಲ್ ಅನ್ಸಾರ್ ಪತ್ರಿಕೆ ಪುರಾವೆಯೆಂದು ಬರೆದಿದೆ: **"ಸಹಾಬಿಗಳು ಪ್ರವಾದಿಯೊಂದಿಗೆ ಪ್ರತೀ ಸೋಮ ವಾರ ಉಪವಾಸ ಅನುಷ್ಠಿಸುವ ಕುರಿತು ಪ್ರಶ್ನಿಸಿದಾಗ ಅವರು ಹೀಗೆಂದರು: ನನ್ನ ಜನನ ಮತ್ತು ವಹ್ಯ್ ಅವತರಣ ಪ್ರಸ್ತುತ ದಿನದಲ್ಲಾಯಿತು."**(ಅಲ್ ಅನ್ಸಾರ್, ಆಗಸ್ಟ್ 15–28, 1995)

ಮುಸ್ಲಿಯಾರ್‌ಗಳ ವಕ್ರ ಬುದ್ಧಿಯೇ, ಹುಷಾರ್! ರಬೀಉಲ್ ಅವ್ವಲ್ ತಿಂಗಳಿಡೀ ಮೌಲಿದ್ ಆಚರಿಸಿ ಮೃಷ್ಟಾನ್ನ ಭೋಜನವನ್ನು ಗಿಟ್ಟಿಸಲು ಹಗಲಿಡೀ ಹಸಿದಿರುವ ಉಪವಾಸ ಪುರಾವೆಯಂತೆ.!!

## ಪ್ರವಾದಿ(ﷺ)ರವರನ್ನು ಹೇಗೆ ಪ್ರೀತಿಸಬೇಕು ?

ಪ್ರವಾದಿ ಸ್ನೇಹದ ಭಾಗವಾಗಿ ನಾವು ಮಾಡುವ ಸರ್ವ ಕರ್ಮಗಳೂ ಅಲ್ಲಾಹ್ ಮತ್ತು ರಸೂಲ್(ﷺ)ರವರು ಕಲಿಸಿದ ರೀತಿಯಲ್ಲೇ ಆಗಿರಬೇಕು. ಯಾಕೆಂದರೆ ಅಲ್ಲಾಹನು ಹೇಳಿರುವನು:

﴿وَمَآ ءَاتَىٰكُمُ ٱلرَّسُولُ فَخُذُوهُ وَمَا نَهَىٰكُمْ عَنْهُ فَٱنتَهُوا۟﴾

**"....ರಸೂಲರು ನಿಮಗೆ ಏನನ್ನು ಕೊಡುತ್ತಾರೋ ಅದನ್ನು ಸ್ವೀಕರಿಸಿರಿ ಮತ್ತು ಅವರು ಯಾವುದರಿಂದ ನಿಮ್ಮನ್ನು ತಡೆದಿರುವರೋ ಅದರಿಂದ ದೂರವಿರಿ......"** (ಸೂರತುಲ್ ಹಶ್ರ್: 59/7)

ಆದ್ದರಿಂದ ಪ್ರವಾದಿ ಸ್ನೇಹವೆಂದರೆ ಪ್ರವಾದಿವರ್ಯರ ಸುನ್ನತಿನ ಸ್ನೇಹವಾಗಿದೆ. ಪ್ರವಾದಿ(ﷺ)ರವರ ಸುನ್ನತನ್ನು ಜೀವನದಲ್ಲಿ ಅಳವಡಿಸುವುದೇ ನಿಜವಾದ ಪ್ರವಾದಿ ಸ್ನೇಹ. ಪ್ರವಾದಿ ಮುಹಮ್ಮದ್(ﷺ)ರವರನ್ನು ಅನುಸರಿಸುತ್ತಾ, ಅವರು ವಿರೋಧಿಸಿದ್ದನ್ನು ಕೈ ಬಿಡುತ್ತಾ ಅವರನ್ನು ಪ್ರೀತಿಸೋಣ. ಆಧಾರವಿಲ್ಲದ ಕಟ್ಟುಕಥೆಗಳು ಹಾಗೂ ಪ್ರವಾದಿ(ﷺ)ರವರು ವಿರೋಧಿಸಿದ, ಸ್ವರ್ಗ ನಿಷಿದ್ಧವೆಂದು ಮುನ್ನೆಚ್ಚರಿಕೆ ನೀಡಿದ ಶಿರ್ಕ್ ತುಂಬಿರುವ ಮೌಲಿದ್ ಕಿತಾಬನ್ನೂ, ಬಿದ್‌ಅತ್ ಆದ ಮಿಲಾದುನ್ನಬಿ ಆಚರಣೆಯನ್ನೂ ಕೈ ಬಿಡುವುದೇ ಪ್ರವಾದಿ ಸ್ನೇಹ.

ಪ್ರವಾದಿ(ﷺ)ರವರನ್ನು ಪ್ರೀತಿಸಬೇಕೆಂಬ ವಿಷಯದಲ್ಲಿ ಯಾರಿಗೂ ಭಿನ್ನಾಭಿಪ್ರಾಯವಿಲ್ಲ. ಆದರೆ ಹೇಗೆ ಪ್ರೀತಿಸಬೇಕು? ಯಾವ ಕರ್ಮಗಳನ್ನು ಮಾಡಿದರೆ ಪ್ರೀತಿ ಪೂರ್ತಿಯಾದೀತು? ಪವಿತ್ರ ಖುರ್‌ಆನ್ ಕಲಿಸುವುದನ್ನು ಗಮನಿಸಿರಿ:

﴿قُلْ إِن كُنتُمْ تُحِبُّونَ ٱللَّهَ فَٱتَّبِعُونِى يُحْبِبْكُمُ ٱللَّهُ وَيَغْفِرْ لَكُمْ ذُنُوبَكُمْ وَٱللَّهُ غَفُورٌ رَّحِيمٌ ﴿٣١﴾﴾

**(ಪ್ರವಾದಿಯವರೇ) ಹೇಳಿರಿ: "ನೀವು ಅಲ್ಲಾಹನ್ನು ಪ್ರೀತಿಸುವುದಾದರೆ ನೀವು ನನ್ನನ್ನು ಅನುಸರಿಸಿರಿ. ಹಾಗಾದರೆ ಅಲ್ಲಾಹನು ನಿಮ್ಮನ್ನು ಪ್ರೀತಿಸುವನು ಮತ್ತು ನಿಮ್ಮ ಪಾಪಗಳನ್ನು ಕ್ಷಮಿಸುವನು. ಅಲ್ಲಾಹನು ಕ್ಷಮಾಶೀಲನೂ ಕರುಣಾಮಯಿಯೂ ಆಗಿದ್ದಾನೆ"**(ಸೂರಃ ಆಲಿ ಇಮ್ರಾನ್–31)

ಪ್ರವಾದಿ(ﷺ)ರವರನ್ನು ಪ್ರೀತಿಸಬೇಕಾದ ರೀತಿಯನ್ನು ಮೇಲಿನ ಆಯತ್ ನಮಗೆ ತೋರಿಸಿ ಕೊಡುತ್ತದೆ. ಪ್ರವಾದಿ ಚರ್ಯೆಯನ್ನು ಜೀವನದಲ್ಲಿ ಯಾಥಾಪ್ರತಿ

ಅಳವಡಿಸುವ ಮೂಲಕ ಪ್ರೀತಿಸಬೇಕು. ಮೇಲಿನ ಆಯತನ್ನು ಪ್ರವಾದಿ(ﷺ) ರವರ ಉಪಸ್ಥಿತಿಯಲ್ಲೇ ಆಲಿಸಿದ ಸ್ವಹಾಬಿಗಳು ಪ್ರವಾದಿ(ﷺ)ರವರನ್ನು ಪ್ರೀತಿಸಿದ್ದರು. ಅಲ್ಲಾಹನನ್ನು ಮಾತ್ರ ಆರಾಧಿಸುವ ಮೂಲಕ, ಪ್ರವಾದಿ ಚರ್ಯೆಯನ್ನು ನಿತ್ಯ ಜೀವನದಲ್ಲಿ ಅಳವಡಿಸಿ, ಪ್ರವಾದಿ(ﷺ)ರವರು ಯಾವೊಂದು ಆಶಯವನ್ನು ಕಲಿಸಿರುವರೋ ಅದನ್ನು ಮನಸ್ಸಿನಿಂದ ಪೂರ್ಣವಾಗಿ ಸ್ವೀಕರಿಸುತ್ತಾ ಅವರು ಜೀವಿಸಿದ್ದಾರೆ. ನಾವು ಪ್ರವಾದಿ(ﷺ)ರವರನ್ನು ಪ್ರೀತಿಸಬೇಕಾದುದು, ಪವಿತ್ರ ಖುರ್‌ಆನಿನಲ್ಲಿ ಅಲ್ಲಾಹನು ತೃಪ್ತಿಪಟ್ಟಿದ್ದೇನೆಂದು ವಿಶ್ಲೇಷಿಸಿದ ಸ್ವಹಾಬಿಗಳು ಪ್ರೀತಿಸಿದ ರೀತಿಯಲ್ಲಾಗಿರಬೇಕು.

ಅತ್ಯುತ್ತಮರಾದ ಜನರು ಸ್ವಹಾಬಿಗಳೆಂದು ಪ್ರವಾದಿ(ﷺ)ರವರೇ ಹೇಳಿರುವುದರಿಂದ ಪ್ರವಾದಿ(ﷺ)ರವರನ್ನು ಪ್ರೀತಿಸುವ ವಿಷಯದಲ್ಲಿ ನಾವು ಅನುಸರಿಸಬೇಕಾದುದು ಅವರ ಮಾರ್ಗವನ್ನಾಗಿದೆ.

ಆಧುನಿಕ ಯುಗದಲ್ಲಿ ಪ್ರವಾದಿ(ﷺ)ರವರನ್ನು ಪ್ರೀತಿಸಲಿಕ್ಕಾಗಿ ಕೆಲವು ಸ್ವಾರ್ಥಿಗಳು ಒಂದು ನೂತನ ಮಾರ್ಗವನ್ನು ಆಯ್ಕೆ ಮಾಡಿದ್ದಾರೆ. ಪ್ರವಾದಿ(ﷺ) ರವರು ಜನಿಸಿದ ತಿಂಗಳಲ್ಲಿ ಗಂಭೀರ ಮೆರವಣಿಗೆಯ ಮೂಲಕ ಘೋಷಣೆ ಕೂಗುತ್ತಾ, ಹಾಡುತ್ತಾ, ಕುಣಿಯುತ್ತಾ ಬೀದಿಗಳಲ್ಲಿ ಜಾತಾ ನಡೆಸುವೊಂದು ಮಾರ್ಗ. ಈ ರೀತಿಯ ಆಚರಣೆಯನ್ನು ಪ್ರವಾದಿ(ﷺ)ರವರಾಗಲಿ, ಪ್ರವಾದಿಯವರ ನಂತರದ ಉತ್ತಮ ತಲೆಮಾರಿನಲ್ಲಿ ಜೀವಿಸಿದ ಸ್ವಹಾಬಿ ಶ್ರೇಷ್ಠರಾಗಲಿ ತೋರಿಸಿ ಕೊಟ್ಟಿಲ್ಲ. ಪ್ರವಾದಿ(ﷺ)ರವರನ್ನು ಪ್ರೀತಿಸುವುದು, ರಸ್ತೆಗಳಲ್ಲಿ ಜನರಿಗೆ ಉಪದ್ರವ ಕೊಡುವ ರೀತಿಯ ಪ್ರಕಟಣೆಗಳೂ, ವಾದ್ಯ ಮೇಳಗಳೂ, ಆನೆಗಳನ್ನು ಬಳಸಿ ಕೊಂಡಿರುವ ಮೊದಲಾದ ಕೃತ್ಯಗಳನ್ನು ನಡೆಸುವ ಮೂಲಕವಲ್ಲ. ದಾರಿಯಿಂದ ಉಪದ್ರವಗಳನ್ನು ನೀಗಿಸುವುದಕ್ಕೂ ಪುಣ್ಯವಿದೆಯೆಂದು ಕಲಿಸಿದ ಇಸ್ಲಾಮಿನ ಹೆಸರಿನಲ್ಲಾಗಿದೆ ಈ ಕೃತ್ಯಗಳು! ಇವುಗಳಿಗೆ ನೇತ್ರತ್ವ ಕೊಡುವುದಾಗಲಿ ಪಂಡಿತರುಗಳು!!

ಶಾಫಿಈ ಮದ್‌ಹಬಿನ ಪಂಡಿತರುಗಳ ಮಧ್ಯೆ ಪ್ರವಾದಿ(ﷺ)ರವರು ಜನಿಸಿದ ದಿನ ಯಾವುದೆಂಬ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ. ಪ್ರವಾದಿ(ﷺ) ರವರು ಜನಿಸಿದ ದಿನ ತುಂಬಾ ಪುಣ್ಯವಿರುವ ದಿನವಾಗಿರುತ್ತಿದ್ದರೆ ಪವಿತ್ರ ಖುರ್‌ಆನಿನಲ್ಲಾಗಲಿ, ಹದೀಸ್‌ಗಳಲ್ಲಾಗಲಿ ಅದರ ಬಗ್ಗೆ ಪ್ರಸ್ತಾವಿಸದಿರಲು ಕಾರಣವೇನು? ಸ್ವಹಾಬಿಗಳು ಅಂದು ಪ್ರವಾದಿ ಜನ್ಮ ದಿನಾಚರಣೆಯನ್ನು ಆಚರಿಸದಿರಲು ಕಾರಣವೇನು ?

ಪ್ರವಾದಿ ﷺ)ರವರ ವಫಾತಿನ ಬಳಿಕ ಅಬೂಬಕರ್(رضي الله عنه), ಉಮರ್ (رضي الله عنه), ಉಸ್ಮಾನ್(رضي الله عنه) ಮತ್ತು ಅಲೀ(رضي الله عنه)ರವರು ಹೆಚ್ಚು ಕಡಿಮೆ 30 ವರ್ಷದಷ್ಟು

ಕಾಲ ಖಿಲಾಫತ್ ನಡೆಸಿದ್ದಾರೆ. ಈ ವರ್ಷಗಳ ನಡುವೆ ಇವರು ಪ್ರವಾದಿ(ﷺ)ರವರ ಜನ್ಮ ದಿನವನ್ನು ಆಚರಿಸದಿರಲು ಮತ್ತು ಮುಸ್ಲಿಂ ಜನತೆಯನ್ನು ಅದರೆಡೆಗೆ ಆಹ್ವಾನಿಸದಿರಲು ಕಾರಣವೇನು ?

ಪ್ರವಾದಿ(ﷺ)ರವರ ವಫಾತಿನ ಬಳಿಕ ಪ್ರವಾದಿ ಪತ್ನಿಯರಾದ ಆಇಶಾ(رضي الله عنها)ರವರು 48 ವರ್ಷ, ಉಮ್ಮು ಸಲಮಃ(رضي الله عنها): 55 ವರ್ಷ, ಹಫ್ಸ (رضي الله عنها): 35 ವರ್ಷ ಜೀವಿಸಿದ್ದರು. ಈ ವೇಳೆಯಲ್ಲಿ ಇವರು ಪ್ರವಾದಿ ಜನ್ಮ ದಿನಾಚರಣೆಯನ್ನು ಒಮ್ಮೆಯೂ ಆಚರಿಸದಿರಲು ಕಾರಣವೇನು ? ಅಲ್ಲಾಹನು ಸರ್ವ ಶಿರ್ಕ್ ಬಿದ್‌ಅತ್‌ಗಳಿಂದ ನಮ್ಮನ್ನು ಸಂರಕ್ಷಿಸಿ ಅನುಗ್ರಹಿಸಲಿ. ಆಮೀನ್.

## ಮುಸ್ಲಿಯಾರ್‌ಗಳು ದುರ್ವ್ಯಾಖ್ಯಾನ ಮಾಡುವ ಆಯತ್‌ಗಳು

﴿ قُلۡ بِفَضۡلِ ٱللَّهِ وَبِرَحۡمَتِهِۦ فَبِذَٰلِكَ فَلۡيَفۡرَحُواْ هُوَ خَيۡرٞ مِّمَّا يَجۡمَعُونَ  ﴾

**"ಹೇಳಿರಿ: ಇದು ಅಲ್ಲಾಹುವಿನ ಅನುಗ್ರಹ ಮತ್ತು ಕಾರುಣ್ಯದಿಂದಾಗಿದೆ. ಆದ್ದರಿಂದ ತನ್ಮೂಲಕ ಅವರು ಸಂತೋಷಪಡಲಿ. ಅವರು ಶೇಖರಿಸಿಡುವವುಗಳಿಗಿಂತಲೂ ಇದು ಉತ್ತಮವಾದುದಾಗಿದೆ."**(ಯೂನುಸ್: 10/58)

ಈ ಸೂಕ್ತದಲ್ಲಿ ಹೇಳಲಾದ ಫದ್‌ಲ್(ಅನುಗ್ರಹ) ಮತ್ತು ರಹ್ಮತ್ (ಕಾರುಣ್ಯ) ಅದು ಪ್ರವಾದಿಯಾಗಿದ್ದಾರೆ ಆದುದರಿಂದ ಆ ಪ್ರವಾದಿ(ﷺ)ರವರು ಜನಿಸಿದ ವಿಷಯದಲ್ಲಿ ನೀವು ಸಂತೋಷ ವ್ಯಕ್ತಪಡಿಸಿರಿ ಎನ್ನುತ್ತಾ ಪ್ರವಾದಿ ಜನ್ಮ ದಿನಾಚರಣೆಗೆ ಈ ಸೂಕ್ತವು ಪುರಾವೆಯೆಂದು ಮುಸ್ಲಿಯಾರ್‌ಗಳು ದುರ್ವ್ಯಾಖ್ಯಾನ ಮಾಡುತ್ತಾರೆ. ವಾಸ್ತವದಲ್ಲಿ ಈ ಸೂಕ್ತಕ್ಕೆ ಇದರ ಹಿಂದಿನ 57ನೆ ಸೂಕ್ತದೊಂದಿಗೆ ಸಂಬಂಧವಿದೆ. ಆ ಆಯತ್ ಹೀಗಿದೆ:

﴿ يَٰٓأَيُّهَا ٱلنَّاسُ قَدۡ جَآءَتۡكُم مَّوۡعِظَةٞ مِّن رَّبِّكُمۡ وَشِفَآءٞ لِّمَا فِي ٱلصُّدُورِ وَهُدٗى وَرَحۡمَةٞ لِّلۡمُؤۡمِنِينَ ﴿٥٧﴾ ﴾

**"ಓ ಮನುಷ್ಯರೇ! ನಿಮ್ಮ ಪ್ರಭುವಿನ ವತಿಯ ಉಪದೇಶವೂ ಹೃದಯಗಳಲ್ಲಿರುವ ರೋಗಕ್ಕೆ ಶಮನವೂ ನಿಮ್ಮೆಡೆಗೆ ಬಂದಿದೆ. (ಅದು) ಸತ್ಯವಿಶ್ವಾಸಿಗಳಿಗೆ ಮಾರ್ಗದರ್ಶನವೂ ಕಾರುಣ್ಯವೂ ಆಗಿದೆ."**(ಯೂನುಸ್:10/57)

ಈ ಮೇಲಿನ ಸೂಕ್ತದಲ್ಲಿ ಹೇಳಿರುವುದು: ಖುರ್‌ಆನಿನ ಕುರಿತಾಗಿದೆ. ಆ

ಕುರ್‌ಆನ್ ಅಲ್ಲಾಹನ ಕಡೆಯಿಂದಿರುವ ಉಪದೇಶ ಮತ್ತು ಹೃದಯಗಳಲ್ಲಿರುವ ರೋಗಗಳಿಗೆ ಶಮನವಾಗಿದೆ.

ಈ ಸೂಕ್ತದ ವ್ಯಾಖ್ಯಾನದಲ್ಲಿ ಇಮಾಮ್ ಖುರ್ತುಬಿ(ﷺ) ಹೇಳುತ್ತಾರೆ:

**قوله تعالى: ﴿قُلْ بِفَضْلِ اللَّهِ وَبِرَحْمَتِهِ﴾ قال أبو سعيد الخدري وابن عباس رضي الله عنهما: فضل الله القرآن، ورحمته الإسلام. وعنهما أيضا: فضل الله القرآن، ورحمته أن جعلكم من أهله. وعن الحسن والضحاك ومجاهد وقتادة: فضل الله الايمان ورحمته القرآن**

**ಅಲ್ಲಾಹನು ಹೇಳುತ್ತಾನೆ: ಪ್ರವಾದಿಯವರೇ ಹೇಳಿರಿ: (ಅಲ್ಲಾಹನ ಅನುಗ್ರಹ ಮತ್ತು ಕಾರುಣ್ಯದಿಂದಾಗಿದೆ). ಅಬೂ ಸಈದಿಲ್ ಖುದ್ರೀ(ؓ) ಮತ್ತು ಇಬ್ನ್ ಅಬ್ಬಾಸ್(ؓ) ಹೇಳುತ್ತಾರೆ: ಫದ್‌ಳ್(ಅನುಗ್ರಹ) ಎಂದರೆ ಖುರ್‌ಆನಾಗಿದೆ. ರಹ್ಮತ್(ಕಾರುಣ್ಯ) ಎಂದರೆ ಇಸ್ಲಾಮ್ ಆಗಿದೆ. ಅವರಿಂದಲೇ ಇನ್ನೊಂದು ಅಭಿಪ್ರಾಯ: ಫದ್‌ಲುಲ್ಲಾಹ್ ಎಂದರೆ ಖುರ್‌ಆನ್. ವರಹ್ಮತಿಹಿ ಎಂದರೆ ನಿಮ್ಮನ್ನು ಆ ಖುರ್‌ಆನಿನ ಜನರನ್ನಾಗಿ ಮಾಡಿರುವುದಾಗಿದೆ. ಹಸನುಲ್ ಬಸ್ವರೀ, ದ್ವಹ್ಹಾಕ್, ಮುಜಾಹಿದ್ ಮತ್ತು ಖತಾದರವರ ಅಭಿಪ್ರಾಯ: ಫದ್‌ಲುಲ್ಲಾಹ್ ಎಂದರೆ ಈಮಾನ್, ರಹ್ಮತಿಹಿ ಎಂದರೆ ಖುರ್‌ಆನ್ ಆಗಿದೆ.**(ತಫ್ಸೀರ್ ಖುರ್ತುಬಿ)

ಈ ವ್ಯಾಖ್ಯಾನದಲ್ಲಿ ಪ್ರಸ್ತಾಪಿಸಲಾದ ಸ್ವಹಾಬಿಗಳಾಗಲಿ ತಾಬಿಉಗಳಾಗಲಿ ಫದ್‌ಲುಲ್ಲಾಹ್ ಮತ್ತು ಅಲ್ಲಾಹನ ರಹ್ಮತ್ ನಿಮಗೆ ಬಂದಿರುವ ಕಾರಣ ನೀವು ಸಂತೋಷಪಡಿರಿ ಎಂಬುದು ಪ್ರವಾದಿ(ﷺ)ರವರ ಜನ್ಮ ದಿನದಲ್ಲಿ ಸಂತೋಷಪಡಿರಿ ಎಂದು ಹೇಳಿಲ್ಲ. ಹೀಗೆಯೇ ಇನ್ನಿತರ ಪ್ರಮಾಣಬದ್ಧವಾದ ಯಾವ ತಫ್ಸೀರಿನಲ್ಲೂ ಈ ಸೂಕ್ತವು ಪ್ರವಾದಿ ಜನ್ಮ ದಿನಾಚರಣೆಗೆ ಪುರಾವೆಯೆಂದು ಉಲ್ಲೇಖಿಸಲಿಲ್ಲ. ಆದ್ದರಿಂದ ಈ ಸೂಕ್ತವು ಪ್ರವಾದಿ(ﷺ)ರವರ ಜನ್ಮ ದಿನಾಚರಣೆಗೆ ಪುರಾವೆ ಎನ್ನುವುದು ಮುಸ್ಲಿಯಾರ್‌ಗಳ ದುರ್ವ್ಯಾಖ್ಯಾನವಾಗಿದೆ.

ದುರ್ವ್ಯಾಖ್ಯಾನ ಮಾಡುವ ಇನ್ನೊಂದು ಆಯತ್:

﴿ إِنَّ ٱللَّهَ وَمَلَٰٓئِكَتَهُۥ يُصَلُّونَ عَلَى ٱلنَّبِيِّ ۚ يَٰٓأَيُّهَا ٱلَّذِينَ ءَامَنُوا۟ صَلُّوا۟ عَلَيْهِ وَسَلِّمُوا۟ تَسْلِيمًا ﴿٥٦﴾ ﴾

**"ನಿಶ್ಚಯವಾಗಿಯೂ ಅಲ್ಲಾಹು ಪ್ರವಾದಿಯವರ ಮೇಲೆ ಅನುಗ್ರಹವನ್ನು ವರ್ಷಿಸುತ್ತಾನೆ ಮತ್ತು ಮಲಕ್‌ಗಳು ಅವರಿಗೆ ಅನುಗ್ರಹಕ್ಕಾಗಿ ಪ್ರಾರ್ಥಿಸುತ್ತಾರೆ. ಓ ಸತ್ಯವಿಶ್ವಾಸಿಗಳೇ! ನೀವೂ ಅವರ ಮೇಲೆ (ಅಲ್ಲಾಹನ) ಅನುಗ್ರಹ ಮತ್ತು ಶಾಂತಿಗಾಗಿ**

**ಪ್ರಾರ್ಥಿಸಿರಿ.”**(ಅಲ್‌ಅಹ್ಝಾಬ್: 33/56)

ಈ ಸೂಕ್ತದಲ್ಲಿ ಪ್ರವಾದಿ(ﷺ)ರವರ ಮೇಲೆ ಸ್ವಲಾತ್ ಮತ್ತು ಸಲಾಮ್ ಹೇಳಲು ಆದೇಶವಿದೆಯೇ ಹೊರತು ಜನ್ಮ ದಿನಾಚರಣೆ ಮಾಡಲು ಒಂದು ಸೂಚನೆ ಕೂಡಾ ಇಲ್ಲ. ಆದ್ದರಿಂದ ಈ ಸೂಕ್ತವನ್ನು ಕೂಡಾ ಮುಸ್ಲಿಯಾರ್‌ಗಳು ದುರ್ವ್ಯಾಖ್ಯಾನ ಮಾಡಿ ಜನರನ್ನು ವಂಚಿಸುತ್ತಿದ್ದಾರೆ. ನಾವು ಪ್ರವಾದಿ(ﷺ) ರವರ ಮೇಲೆ ಸ್ವಲಾತ್ ಅತ್ಯಧಿಕವಾಗಿ ಹೇಳುವವರೂ ಹೇಳಲು ಕಲಿಸುವವರೂ ಆಗಿದ್ದೇವೆ. ಆದ್ದರಿಂದ ಸ್ವಲಾತ್ ಹೇಳಲು ಕಲಿಸಿದ ಆಯತ್ ಪ್ರವಾದಿ ಜನ್ಮ ದಿನವನ್ನು ಆಚರಿಸಲು ಪುರಾವೆಯಲ್ಲ.

## ಮೌಲಿದ್‌ಗಳನ್ನು ಪಂಡಿತರು ತಳ್ಳಿ ಬಿಟ್ಟರು

ಹಿಂದಿನ ಕಾಲಗಳಲ್ಲಿ ನಮ್ಮೂರುಗಳಲ್ಲಿ ಅಸಂಖ್ಯಾತ ಮೌಲಿದ್‌ಗಳು ಪ್ರಚಾರದಲ್ಲಿತ್ತು. ಆದರೆ ಆಧುನಿಕ ಕಾಲದಲ್ಲಿ ಕೇವಲ 5 ಮೌಲಿದ್‌ಗಳನ್ನು ಮಾತ್ರ ಸಮಸ್ತ ಅಂಗೀಕರಿಸುವುದೆಂದು ನಾಲ್ಕು ವರ್ಷಗಳ ಕೇರಳದ ‘ವಲ್ಲಪುಝ ಸಂವಾದ ವ್ಯವಸ್ಥೆ’ಯಲ್ಲಿ ಸಮಸ್ತದವರ ಮುಖಂಡರೇ ಹೇಳಿದ್ದಾರೆ. ಹಾಗಾದರೆ ನಮ್ಮ ಪೂರ್ವಿಕರು ಪುಣ್ಯವೆಂದು ಭಾವಿಸಿ ಹೇಳಿದ ‘ಮೌಲಿದ್’ಗಳು ಎಲ್ಲಿ ? ಅವರಿಗೆ ಅದಕ್ಕೆ ಪುಣ್ಯ ಯಾರು ಕೊಡುವರು ? ಇಸ್ಲಾಮಿನ ತೌಹೀದ್‌ಗೆ ವಿರುದ್ಧವಾದ ಶಿರ್ಕ್‌ನ ಗೆರೆಗಳನ್ನು ಬರೆದು ಸೇರಿಸಿ ಅವಿವೇಕಿಗಳಾದ ಒಂದು ಸಮೂಹದಿಂದ ಓದಿಸಿ ದಕ್ಷಿಣೆ ಪಡೆದು ಅವರನ್ನು ಪಾಪಗಳ ಕಡೆಗೆ ಕೊಂಡೊಯ್ದಿರುವುದಕ್ಕೆ ಯಾವ ಪಂಡಿತ ಸಮೂಹ ಉತ್ತರ ಹೇಳುವರು ?

ಅಲ್ಲಾಹನು ನಮಗೆಲ್ಲರಿಗೂ ಪ್ರವಾದಿ(ﷺ)ರವರು ಕಲಿಸಿಕೊಟ್ಟ ಆಚಾರಾನುಷ್ಠಾನಗಳನ್ನು ಜೀವನದಲ್ಲಿ ಅಳವಡಿಸುವ ಮೂಲಕ ಅವರನ್ನು ಪ್ರೀತಿಸಲು ತೌಫೀಕ್ ನೀಡಿ ಅನುಗ್ರಹಿಸಲಿ. ಆಮೀನ್.

وصلى الله وسلم على نبينا محمد وعلى آله وصحبه أجمعين